# ವಾನಸಿ

ತಿಂಗಳ ಪತ್ರಿಕೆ ಸೆಪ್ಟೆಂಬರ್, 1993

- ★ ಮಹಿಳೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು
- ★ ಅಂದು ಇಂದಿನ ಹೆಣ್ಣು
- ★ ಚಿಮಣಿ ಎಣ್ಣೆಯ ನಾತ
- ★ ಆಕಸ್ಮಿಕ–ಸ್ತ್ರೀಪರ ನಿಲುವಿನ ನೈಜ ಚಿತ್ರಣ
- ★ ಮಹಿಳೆಯರ ನಿರ್ವಹಣೆಯಲ್ಲಿ ಅಂತರ್‌ದೃಷ್ಟಿಯೂ ಇದೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : ೮ ಸಂಚಿಕೆ : ೧೧

ಸೆಪ್ಟೆಂಬರ್- ೧೯೯೩





**ವಿಳಾಸ :**

**"ಮಾನಸ"** ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು–560 067

**ಸಂಪರ್ಕ ವಿಳಾಸ**

ನಂ–457, 12ನೇ ಅಡ್ಡರಸ್ತೆ
ಪಶ್ಚಿಮ ಕಾರ್ಡ್‌ರಸ್ತೆ, 2ನೇ ಹಂತ
ಮಹಾಲಕ್ಷ್ಮಿಪುರ, ಬೆಂಗಳೂರು-560 086



ಬಿಡಿ ಪ್ರತಿ : **3-00 ರೂ.**

ಸೂಚನೆ : ವಾರ್ಷಿಕ ಚಂದಾ : **25 ರೂ.**
ಆಜೀವ ಚಂದಾ : **300 ರೂ.**

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.


**ಈ ಸಂಚಿಕೆಯಲ್ಲಿ...**


ಸಂಪಾದಕೀಯ

ಮಹಿಳೆ ಮತ್ತು ಅಭಿವೃದ್ಧಿ
ಕಾರ್ಯಕ್ರಮಗಳು
–ವೆಂ. ವನಜಾ

ಅಂದು ಇಂದಿನ ಹೆಣ್ಣು (ಕವನ)
–ಸುಶೀಲಾ ವಿ. ಬಾಳಿಗಾ

ಚಿಮಣಿ ಎಣ್ಣೆ ನಾತ (ಕತೆ)
–ಅಮೃತಾ ಪ್ರೀತಂ

ಆಕಸ್ಮಿಕ - ಸ್ತ್ರೀಪರ ನಿಲುವಿನ ನೈಜ ಚಿತ್ರಣ
–ರಾಜೇಶ್ವರಿ ಎಚ್. ಎಸ್.

ಸಂವೇದನೆ
–ಸರಸ್ವತಿ ದು.

ಮಹಿಳೆಯರ ನಿರ್ವಹಣೆಯಲ್ಲಿ
ಅಂತರ್‌ದೃಷ್ಟಿಯೂ ಇದೆ (ಸಂದರ್ಶನ)
–ವಿ. ಗಾಯತ್ರಿ

ಬಳೆಗಾರ್ತಿ (ಕವನ)
–ಸರಸ್ವತಿ ದು.



ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂಗು-೫೬೦೦೬೭



# ಸಂಪಾದಕೀಯ

ಒಂದು ದಶಕದಿಂದ ಮಹಿಳಾ ಚಳುವಳಿಗಳು ಎತ್ತುತ್ತಿರುವ ಮಹಿಳಾ ಪ್ರಶ್ನೆಗಳ ಪರಿಣಾಮ ಸಮಾಜದ ವಿವಿಧ ಸ್ತರದ ಮೇಲೆ ಬೀರಿದಂತೆ, ಸರಕಾರದ ಮೇಲೆಯೂ ತನ್ನ ಪ್ರಭಾವವನ್ನು ಉಂಟುಮಾಡಿದೆ. ಸರಕಾರ ಮಹಿಳೆಯರ ಅಭಿವೃದ್ಧಿ ಮತ್ತು ಪ್ರಗತಿಯ ಹೆಸರಿನಲ್ಲಿ ನಾನಾ ಯೋಜನೆಗಳನ್ನು ಹಮ್ಮಿಕೊಂಡಿರುವುದು ಕಂಡುಬರುತ್ತದೆ. ಮಹಿಳೆಯರ ಸಾಮಾಜಿಕ, ಆರ್ಥಿಕ ಸ್ಥಿತಿ-ಗತಿಗೆ ಸಂಬಂಧಪಟ್ಟ, ವಿಪುಲ ಯೋಜನೆಗಳ ಸ್ವರೂಪ, ಅವುಗಳ ಹಿಂದಿರುವ ತಾತ್ವಿಕ ನಿಲುವು, ಕಾರ್ಯಗತಗೊಳಿಸಲು ಅನುಸರಿಸುವ ವಿಧಿ-ವಿಧಾನಗಳು, ಯೋಜನೆಗಳ ನಿರ್ವಾಹಕರ ದೃಷ್ಟಿಕೋನ ಮುಂತಾದ ಮೂಲಭೂತ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗಿರುವುದು ಅತ್ಯಗತ್ಯವಾಗಿದೆ.

ಯೋಜನೆಗಳ ಮಾಹಿತಿ, ಮಾಹಿತಿಯನ್ನು ನೀಡುವ ಮಾಧ್ಯಮ, ಅವು ತಲುಪಬೇಕಾದ ಮಹಿಳೆಯರನ್ನು ಕುರಿತು ವಿವರವಾಗಿ ಪರಿಶೀಲಿಸಬೇಕಾಗುತ್ತದೆ. ಇಂತಹ ಯೋಜನೆಗಳ ಪ್ರಯೋಜನವನ್ನು ಬೆರಳೆಣಿಕೆಯ, ಅದರಲ್ಲೂ ಅಧಿಕಾರ ಶಾಹಿಯ ಸಂಪರ್ಕವಿರುವ ಅಥವಾ ರಾಜಕೀಯ ಪಕ್ಷದ ಕಾರ್ಯಕರ್ತರ ಮೂಲಕ ಕೆಲವೇ ಮಹಿಳೆಯರು ಪಡೆಯುತ್ತಿದ್ದಾರೆ. ಮಧ್ಯವರ್ತಿಗಳಲ್ಲಿದೆ. ಮಹಿಳೆಯರೊಂದಿಗೆ ನೇರ ಸಂಪರ್ಕ ಪಡೆಯುವುದು, ಮಹಿಳೆಯರಿಗೆ ಅಗತ್ಯವಾದ ತರಬೇತಿಯನ್ನು ನೀಡುವುದು, ಅಧಿಕಾರಿಶಾಹಿ ವ್ಯವಸ್ಥೆಯನ್ನು ತಪ್ಪಿಸುವುದು, ಯೋಜನೆಗಳನ್ನು ಕಾರ್ಯಗತಗೊಳಿಸುವಾಗ ಸರಳ-ವಿಧಿವಿಧಾನಗಳನ್ನು ಅನುಸರಿಸುವುದು, ಮಹಿಳೆಯರೇ ಸ್ವಯಂಪ್ರೇರಿತವಾಗಿ ಮುಂದು ಬರುವಂತೆ ವಾತಾವರಣದ ನಿರ್ಮಾಣ, ಮುಂತಾದ ಅಂಶಗಳತ್ತ ಈ ಯೋಜನೆಯ ನಿರ್ವಾಹಕರು ಗಮನ ನೀಡಬೇಕಾಗಿದೆ.

ಇಂತಹ ಯೋಜನೆಗಳಿಂದ ಸ್ತ್ರೀಯರ ಜೀವನದಲ್ಲಿ ಮೂಲಭೂತ ಬದಲಾವಣೆಯನ್ನೇನೂ ನಿರೀಕ್ಷಿಸಲು ಸಾಧ್ಯವಿಲ್ಲವಾದರೂ, ತಾತ್ಕಾಲಿಕ ಸ್ವರೂಪದ ಅವಕಾಶಗಳನ್ನು ಮಹಿಳೆಯರಿಗೆ ಒದಗಿಸಿ ಕೊಡುತ್ತದೆ. ಆದರೆ ಇದೂ, ಯೋಜನೆಗಳನ್ನು ಪ್ರಾಮಾಣಿಕವಾಗಿ ಕಾರ್ಯಗತಗೊಳಿಸುವ ಪ್ರಯತ್ನವನ್ನು ಅವಲಂಬಿಸಿದೆಯೆನ್ನಬಹುದು.

# ಮಹಿಳೆ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳು

**ನೆಂ. ವನಜ**

ಕರ್ನಾಟಕದ ಜನಸಂಖ್ಯೆ 44.89 ಕೋಟಿ ಇದ್ದು ಅದರಲ್ಲಿ 21.96 ಕೋಟಿ ಮಹಿಳೆಯರಿದ್ದಾರೆ. ಪ್ರತಿ ಸಾವಿರ ಮಂದಿ ಪುರುಷರಿಗೆ ಮಹಿಳೆಯರ ಸಂಖ್ಯೆ 960ರಷ್ಟಿದೆ. ಇದು ಜಿಲ್ಲೆಯಿಂದ ಜಿಲ್ಲೆಗೆ ಗ್ರಾಮದಿಂದ ನಗರಕ್ಕೆ ಬೇರೆಬೇರೆಯಾಗಿದೆ. ಮಹಿಳೆಯರ ಸಾಕ್ಷರತಾ ಮಟ್ಟ ಶೇ. 44.34 ಇದ್ದು ರಾಷ್ಟ್ರಮಟ್ಟದ ಮಹಿಳಾ ಸಾಕ್ಷರತಾ ಮಟ್ಟ (39.42)ಕ್ಕಿಂತ ಹೆಚ್ಚಾಗಿದೆ. ಆದರೆ ರಾಜ್ಯದ ಪುರುಷ ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆಯಾಗಿದೆ.

ಮಹಿಳೆಯರಲ್ಲಿ ಜನನ ಜೀವಿತಾವಧಿಯು 65.3 ವರ್ಷಗಳಿದ್ದು ರಾಷ್ಟ್ರಮಟ್ಟದ ಜೀವಿತಾವಧಿ ಪ್ರಮಾಣಕ್ಕಿಂತ (61.7) ಹೆಚ್ಚಿದೆ. ಅಲ್ಲದೆ ಕರ್ನಾಟಕದ ಪುರುಷರ ಜೀವಿತಾವಧಿಗಿಂತಲೂ ಹೆಚ್ಚಿದೆ. 1988ರಲ್ಲಿ ಹುಟ್ಟಿದ ಸಾವಿರ ಹೆಣ್ಣುಮಕ್ಕಳಲ್ಲಿ 50 ಮಕ್ಕಳು ಮರಣ ಹೊಂದಿದರೆ ಇದರ ಪ್ರಮಾಣ ಗಂಡು ಶಿಶುಗಳಲ್ಲಿ 80 ರಷ್ಟಿತ್ತು. 1984ರಲ್ಲಿ ಮರಣ ಪ್ರಮಾಣ ಹೆಣ್ಣು ಮಕ್ಕಳಲ್ಲಿ ಶೇ 9.2ರಷ್ಟಿದ್ದರೆ ಪುರುಷರಲ್ಲಿ ಶೇ. 11ರಷ್ಟು ಇತ್ತು.

ಕರ್ನಾಟಕದಲ್ಲಿ ಒಟ್ಟು ಜನಸಂಖ್ಯೆಯ ಶೇ. 40.2 ರಷ್ಟು ಕಾರ್ಮಿಕರಿದ್ದು, ಮಹಿಳಾ ಕಾರ್ಮಿಕರು ಶೇ. 18.95 ರಷ್ಟಿದ್ದಾರೆ. ಇದು ಪುರುಷ ಕಾರ್ಮಿಕರ ಸಂಖ್ಯೆಗಿಂತ (ಶೇ. 53.9) ಕಡಿಮೆಯಿದೆ.

ಇಲ್ಲಿ ಕೊಟ್ಟಿರುವ ಅಂಕಿ ಅಂಶಗಳು ರಾಜ್ಯದಲ್ಲಿ ಮಹಿಳೆಯರ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಅಷ್ಟೇನೂ ಉತ್ತಮವಾಗಿಲ್ಲದ ಪರಿಸ್ಥಿತಿಯನ್ನೇ ಸುಧಾರಿಸುವ ದಿಸೆಯಲ್ಲಿ ಹಲವಾರು ಕಾರ್ಯಕ್ರಮಗಳು, ಯೋಜನೆಗಳು ಸರಕಾರ ಹಾಗೂ ಸರಕಾರೇತರ-ಸಂಸ್ಥೆಗಳಿಂದ ನಡೆಯುತ್ತಿರುವುದನ್ನು ಕಾಣುತ್ತಿದ್ದೇವೆ. ಮಹಿಳೆಯರಿಗೆ ಸಂಬಂಧಿಸಿದ ನಿರಾಶಾದಾಯಕ ಅಂಕಿ ಅಂಶಗಳಿಗೆ ರಾಜ್ಯ ಸರಕಾರ ಸ್ಪಂದಿಸಿದೆ. ಮಹಿಳೆಯರಿಗಾಗಿಯೇ ಮೀಸಲಾದ ಹಲವಾರು ಯೋಜನೆಗಳನ್ನು ಕೇಂದ್ರ ಸರಕಾರದ ನೆರವಿನೊಂದಿಗೆ ಇಲ್ಲವೇ ತನ್ನದೇ ಯೋಜನೆ ಅಥವಾ ಯೋಜನೇತರ ಯೋಜನೆಗಳನ್ನು ರೂಪಿಸಿಗೊಂಡಿದೆ. ಈ ಯೋಜನೆಗಳು ಮಹಿಳೆಯರ ಶಿಕ್ಷಣ, ಆರೋಗ್ಯ, ಉದ್ಯೋಗ, ಪುನರ್ವಸತಿ ಮುಂತಾದುವುಗಳಿಗೆ ಸಂಬಂಧಿಸಿದ್ದು ಮಹಿಳಾ ಅಭಿವೃದ್ಧಿಗೆ ಪೂರಕ ಹಾಗೂ ಸಹಾಯಕವಾದವುಗಳೆನ್ನಬಹುದಾಗಿದೆ. ಇಂಥ ಕಾರ್ಯಕ್ರಮಗಳ ಕಡೆ ಒಂದು ಪಕ್ಷಿನೋಟವೇ ಈ ಲೇಖನವಾಗಿದೆ.

ಮಹಿಳೆಯರಿಗಾಗಿ ಮೀಸಲಾದ ಕಾರ್ಯಕ್ರಮಗಳನ್ನು ಜಾರಿಗೊಳಿಸುವ ದಿಕ್ಕಿನಲ್ಲಿ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಅಂತಾರಾಷ್ಟ್ರೀಯ ಮಹಿಳಾ ವರ್ಷ ಅಂದರೆ 1975ರಲ್ಲಿ ಸ್ಥಾಪಿತವಾಯಿತು. ಈ ಇಲಾಖೆಯು ಸ್ವಯಂ ಸೇವಾ ಸಂಸ್ಥೆಗಳು ಮಹಿಳೆಯರಿಗಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಧನಸಹಾಯ ನೀಡುವ ಮೂಲಕ ಪ್ರೋತ್ಸಾಹಿಸುತ್ತದೆಂದು ಹೇಳಲಾಗಿದೆ. ಅಲ್ಲದೆ ಮಹಿಳಾ ಅಭಿವೃದ್ಧಿಗೆ ಮಾರಕವಾದ ಪ್ರಚಲಿತ, ಸಾಮಾಜಿಕ ಸಂಪ್ರದಾಯ ಮತ್ತು ಆಚರಣೆಗಳ ವಿರುದ್ಧ ಅರಿವು ಮೂಡಿಸುವುದು ಹಾಗೂ ಸಾರ್ವಜನಿಕ ಮುಂತಾದ ಕಾರ್ಯಕ್ರಮಗಳಿಗೆ ಪ್ರೋತ್ಸಾಹ ನೀಡುವುದು ಈ ಇಲಾಖೆಯ ಸ್ಥಾಪನೆಯ ಹಿಂದಿನ ಉದ್ದೇಶವಾಗಿದೆ.

ಇಲಾಖೆಯು ಕೈಗೊಂಡ ಕಾರ್ಯಕ್ರಮಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು–ಶಿಕ್ಷಣ, ಉದ್ಯೋಗ ಮತ್ತು ಸಂರಕ್ಷಣ ಕಾರ್ಯಕ್ರಮಗಳು.

ಹೆಣ್ಣುಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಲು ಹಾಗೂ ಶಾಲೆ ಬಿಡುವ ಹೆಣ್ಣುಮಕ್ಕಳ ಸಂಖ್ಯೆಯನ್ನು ನಿಯಂತ್ರಿಸಲು ಕೆಳಕಂಡ ಕಾರ್ಯಕ್ರಮಗಳಿವೆ :–

— ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳಿಗೆ ಹಾಜರಾತಿ ವಿದ್ಯಾರ್ಥಿ ವೇತನ.

— ಸ್ಪರ್ಧಾತ್ಮಕ ಪರೀಕ್ಷೆಗಾಗಿ ತರಬೇತಿ ಪಡೆಯಲು ಮಹಿಳೆಯರಿಗೆ ಧನಸಹಾಯ.

— ಮಹಿಳಾ ಐಟಿಐಗಳನ್ನು ಬಲಪಡಿಸುವಿಕೆ.

— ಹೆಣ್ಣುಮಕ್ಕಳ ವಸತಿಗೃಹಗಳು.

ಮಹಿಳೆಯರು ಹೆಚ್ಚು ಹೆಚ್ಚು ವೃತ್ತಿ ತರಬೇತಿ ಪಡೆಯಲು ಅವಕಾಶವಾಗುವಂತೆ ಕೆಲವು ಕಾರ್ಯಕ್ರಮಗಳಿವೆ:—

— ವೃತ್ತಿಶಿಕ್ಷಣ ಪಡೆಯಲು ಧನಸಹಾಯ ಯೋಜನೆ
— ತರಬೇತಿ ಮತ್ತು ಉದ್ಪಾದನಾ ಕೇಂದ್ರಗಳು ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಮನೆಯ ಮನೆಯ ಹೊರಗಿನ ಉದ್ಯೋಗಗಳನ್ನು ಒಪ್ಪಿಕೊಳ್ಳಲು ಸಾಧ್ಯವಾಗುವಂತೆ :–
— ಉದ್ಯೋಗಸ್ಥ ಮಹಿಳೆಯರ ಹಾಸ್ಟೆಲ್ ಹಾಗೂ
— ಉದ್ಯೋಗಸ್ಥ ತಾಯಂದಿರ ಮಕ್ಕಳಿಗಾಗಿ ಶಿಶುಪಾಲನಾ ಕೇಂದ್ರಗಳು.

ಮುಂತಾದ ಯೋಜನೆಗಳಿವೆ.

ಅನಾಥ ಹಾಗೂ ನಿರ್ಗತಿಕ ಮಹಿಳೆಯರಿಗೆ ಸಾಮಾಜಿಕ ಭದ್ರತೆಯನ್ನೊದಗಿಸುವ ಸಲುವಾಗಿ ಹಲವು ಯೋಜನೆಗಳಿವೆ:—

— ನಿರ್ಗತಿಕ ಮಹಿಳೆಯರಿಗಾಗಿ ತರಬೇತಿ ಕೇಂದ್ರಗಳನ್ನು ತೆರೆಯಲು ಸ್ವಯಂ ಸೇವಾ ಸಂಸ್ಥೆಗಳಿಗೆ ಧನಸಹಾಯ
— ಅರ್ಹ ಮಹಿಳೆಯರಿಗೆ ಧನಸಹಾಯ
— ನಿರ್ಗತಿಕ ಮಹಿಳೆಯರಿಗೆ ಪಿಂಚಣಿ ಯೋಜನೆ
— ನಿರ್ಗತಿಕ ವಿಧವೆಯರು ಮತ್ತು ದೇವದಾಸಿಯರ ಮರು ಮದುವೆಗಾಗಿ ಧನಸಹಾಯ
— ದೇವದಾಸಿಯರ ಪುನರ್ವಸತಿ
— ಸ್ಟೇಟ್ ಹೋಂ ಹಾಗೂ ರಿಸೆಪ್ಷನ್ ಸೆಂಟರ್ಸ್
— ಸಂಸ್ಥೆಗಳ ನಿವಾಸಿಗಳ ವಿವಾಹಕ್ಕಾಗಿ ಧನಸಹಾಯ
— ಸಾಮಾಜಿಕ ಅನಿಷ್ಟಗಳ ನಿರ್ಮೂಲನೆಗಾಗಿ ವಿಶೇಷ ಘಟಕ

ಮಹಿಳೆಯರಿಗೆ ಸಾಂಘಿಕ ಶಕ್ತಿಯ ಮನವರಿಕೆ ಮಾಡಿಕೊಡುವ ಉದ್ದೇಶದಿಂದ ಮಹಿಳಾ ಮಂಡಲಿ ಹಾಗೂ ಮಹಿಳಾ ಮಂಡಳಿಗಳ ಒಕ್ಕೂಟ ರಚನೆಗಾಗಿ ಧನಸಹಾಯ ಯೋಜನೆ ಇದೆ.

ಭೂರಹಿತ ಮಹಿಳಾ ಕಾರ್ಮಿಕರು ಮತ್ತು ಮಹಿಳಾ ನೇಯ್ಗೆಯವರಿಗೆ ಹೆರಿಗೆ ಭತ್ಯೆ ನೀಡುವ ಯೋಜನೆಯೂ ಇದೆ.

ಮೇಲಿನ ಕಾರ್ಯಕ್ರಮಗಳನ್ನು ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯು ಜಾರಿಗೊಳಿರದರೆ ಇನ್ನಿತರ ಇಲಾಖೆಗಳೂ ಮಹಿಳಾ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿವೆ.

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ 1987ರಲ್ಲಿ ಸ್ಥಾಪನೆಯಾಗಿದ್ದು ಕೆಳಕಂಡ ಉದ್ದೇಶಗಳನ್ನು ಹೊಂದಿದೆ. ಅವೆಂದರೆ :

— ಮಹಿಳಾ ಉದ್ಯಮಾಕಾಂಕ್ಷಿಗಳನ್ನು ಗುರುತಿಸುವುದು
— ಯೋಜನಾ ವರದಿಗಳನ್ನು ತಯಾರಿಸುವುದು
— ತಾಂತ್ರಿಕ ಸಲಹೆ, ಸಾಲ ಸೌಲಭ್ಯ, ಮಾರುಕಟ್ಟೆಗಳನ್ನು ಒದಗಿಸುವುದು; ಮಹಿಳಾ ಸಂಘಗಳನ್ನು ಪ್ರೋತ್ಸಾಹಿಸುವುದು; ಕೌಶಲ ತರಬೇತಿ ನೀಡುವುದು

ನಿಗಮವು ಹಲವಾರು ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿದೆ. ಅವೆಂದರೆ :—

— ಶಾಲಾ ಸಮವಸ್ತ್ರಗಳ ಹೊಲಿಗೆ
— ಗೃಹಕಲ್ಯಾಣ ಯೋಜನೆ
— ಪರಿಶಿಷ್ಟ ಜಾತಿಯ ಮಹಿಳೆಯರಿಗಾಗಿ ಕೌಶಲ ಅಭಿವೃದ್ಧಿ ಕಾರ್ಯಕ್ರಮ
— ದೇವದಾಸಿ ಪುನರ್ವಸತಿ ಕಾರ್ಯಕ್ರಮ
— ಕೈಮಗ್ಗ ನೇಯ್ಗೆ
— ತರಬೇತಿ ಮತ್ತು ಉತ್ಪಾದನಾ ಕೇಂದ್ರ
— ಜಾಗೃತಿ ಕಾರ್ಯಕ್ರಮ
— ಮಹಿಳೆಯರಿಗೆ ಇತರೆ ವಿಷಯಗಳಲ್ಲಿ ತರಬೇತಿ
— ಉದ್ಯಮ ಕುರಿತಂತೆ ಅರಿವು ಮತ್ತು ಅಭಿವೃದ್ಧಿ ಕಾರ್ಯಕ್ರಮ
— ಗ್ರಾಮೀಣ ಮಹಿಳೆಯರ ಅಭಿವೃದ್ಧಿ ಯೋಜನೆ ಮುಂತಾದವು.

ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮವೂ ಮಹಿಳೆಯರಿಗಾಗಿ ಹಲವು ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿದೆ.

— ದೇವದಾಸಿ ಪುನರ್ವಸತಿ ಕಾರ್ಯಕ್ರಮ
— ಮಹಿಳಾ ತರಬೇತಿ ಕೇಂದ್ರಗಳು
— ಗಿರಿಜನ ಮಹಿಳೆಯರ ಹೊಲಿಗೆ ತರಬೇತಿ ಕೇಂದ್ರಗಳು

'ಡ್ವಾಕ್ರಾ' ಎಂದೇ ಪ್ರಚಲಿತವಾದ ಗ್ರಾಮೀಣ ಪ್ರದೇಶಗಳ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ

ಕಾರ್ಯಕ್ರಮವು ಮಹಿಳೆಯರಿಗೇ ಮೀಸಲಾಗಿದೆ. ಇದು ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಒಂದು ಉಪಯೋಜನೆಯಾಗಿದ್ದು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮೂಲಕ ಜಾರಿಗೊಳ್ಳುತ್ತಿದೆ. ಈ ಕಾರ್ಯಕ್ರಮದಡಿಯಲ್ಲಿ ಮಹಿಳೆಯರಿಗೆ ಆದಾಯಜನಕ ಚಟುವಟಿಕೆಗಳನ್ನು ನಡೆಸಲು ಹಾಗೂ ಅದಕ್ಕೆ ಅಗತ್ಯವಾದ ಇತರೆ ಸೌಲಭ್ಯಗಳನ್ನು ಒದಗಿಸಲಾಗುತ್ತದೆ. ಕಾರ್ಯಕ್ರಮವು ರಾಜ್ಯದ ಹದಿನಾಲ್ಕು ಜಿಲ್ಲೆಗಳಲ್ಲಿ ಜಾರಿಯಲ್ಲಿದೆ.

ಸಮಾಜ ಕಲ್ಯಾಣ ಇಲಾಖೆಯು ಪರಿಶಿಷ್ಟ ಜಾತಿಯ ಮಹಿಳೆಯರಿಗೆ ವೃತ್ತಿ ತರಬೇತಿ ಯೋಜನೆಯನ್ನೂ, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆಯು ಬಾಲಕಿಯರು ವಿವಿಧ ಹಂತಗಳ ಶಿಕ್ಷಣವನ್ನು ಪಡೆಯಲು ಅನುಕೂಲವಾಗುವಂತೆ ವಸತಿಗೃಹಗಳನ್ನೂ ಹಾಗೂ ಗಿರಿಜನ ಮಹಿಳೆಯರಿಗಾಗಿ ಹೊಲಿಗೆ ತರಬೇತಿ ಕೇಂದ್ರಗಳನ್ನು ತೆರೆಯುವ ಯೋಜನೆಗಳನ್ನು ಜಾರಿಗೊಳಿಸುತ್ತಿವೆ.

ಮೇಲೆ ಹೇಳಿದ ಹಲವಾರು ಯೋಜನೆಗಳನ್ನು ಗಮನಿಸಿದಾಗ ರಾಜ್ಯ ಸರಕಾರವು ಮಹಿಳಾ ಅಭಿವೃದ್ಧಿಯಲ್ಲಿ ಹೆಚ್ಚಿನ ಕಾಳಜಿ ಹೊಂದಿದೆ ಎಂದೆನ್ನಬಹುದಾದರೂ ಇದುವರೆಗಿನ ಯೋಜನೆಗಳ ಜಾರಿಯಲ್ಲಿ ಫಲಾನುಭವಿಗಳ ಅಂಕಿ ಅಂಶಗಳನ್ನು ಗಮನಿಸಿದಾಗ ಭ್ರಮನಿರಸನವಾಗುತ್ತದೆ. ಕೋಟಿ ಸಂಖ್ಯೆಯಲ್ಲಿರುವ ಮಹಿಳೆಯರಲ್ಲಿ ನೂರು/ಸಾವಿರ ಸಂಖ್ಯೆಯಲ್ಲಿ ಫಲಾನುಭವಿಗಳಿರುವುದನ್ನು (ಅದೂ ಹಲವು ವರ್ಷಗಳ ಅವಧಿಯಲ್ಲಿ) ಕಂಡಾಗ ಇಂಥ ಕಾರ್ಯಕ್ರಮಗಳ ಪ್ರಯೋಜಕತೆಯನ್ನೇ ಪ್ರಶ್ನಿಸಬೇಕಾಗುತ್ತದೆ. ಉದಾಹರಣೆಗೆ, 1986ರಿಂದ 1993ರವರೆಗೆ ಅಂದರೆ 9 ವರ್ಷಗಳ ಅವಧಿಯಲ್ಲಿ ದೇವದಾಸಿ ಹಾಗೂ ಅನಾಥ ವಿಧವೆಯರ ಪುನರ್ವಿವಾಹಕ್ಕೆ ಧನ ಸಹಾಯ ಯೋಜನೆಯಲ್ಲಿ ಕೇವಲ 26 ಮಂದಿ ದೇವದಾಸಿಯರು ಹಾಗೂ 356 ವಿಧವೆಯರು ಪ್ರಯೋಜನ ಪಡೆದಿದ್ದಾರೆ. 1981 ರಿಂದ 1993ರವರೆಗೆ ರಾಜ್ಯದಲ್ಲಿ 225 ಶಿಶುಪಾಲನಾ ಕೇಂದ್ರಗಳನ್ನು ತೆರೆಯಲು ಸಾಧ್ಯವಾಗಿದೆ. ಇನ್ನು ಕೆಲವು ಕಾರ್ಯಕ್ರಮಗಳಿಗೆ ಸಂಬಂಧಿಸಿದಂತೆ ಅಂಕಿ ಅಂಶಗಳೇ ದೊರೆಯುವುದಿಲ್ಲವಾದ ಕಾರಣ ಅವು ವಾಸ್ತವದಲ್ಲಿ ಜಾರಿಯಲ್ಲಿವೆಯೋ ಎಂಬ ಅನುಮಾನ ಮೂಡುತ್ತದೆ. ಅಲ್ಲದೆ ಇಂಥ ಕಾರ್ಯಕ್ರಮಗಳು ತಲುಪಬೇಕಾದ ಸಂಖ್ಯೆಯಲ್ಲಿ ತಲುಪುತ್ತಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ. ಕಾರಣ ಹಲವು : ಮೊದಲನೆಯದಾಗಿ, ಇವು ಅಂಥ ಜನಪ್ರಿಯ ಕಾರ್ಯಕ್ರಮಗಳಲ್ಲ ; ಅವುಗಳ ಬಗ್ಗೆ ಅರ್ಹ ಮಹಿಳೆಯರಿಗೆ ಅಗತ್ಯ ಮಾಹಿತಿ ದೊರೆಯುತ್ತಿಲ್ಲ ಅಥವಾ ಅಂಥ ತಿಳುವಳಿಕೆ ನೀಡುವ ಪ್ರಯತ್ನ ಸರಕಾರದ ವತಿಯಿಂದ ನಡೆಯುತ್ತಿಲ್ಲ. ಎರಡನೆಯದಾಗಿ, ಅರ್ಹ ಮಹಿಳೆಯರನ್ನು ಗುರುತಿಸುವ ಕಾರ್ಯದಲ್ಲಿ ಲೋಪದೋಷಗಳಿರುವುದು, ಮೂರನೆಯದಾಗಿ, ಕಡಿಮೆ ಮೊತ್ತದ ಹಣಕಾಸಿನ ಮೀಸಲಾತಿಯಿಂದಾಗಿ ಕಾರ್ಯಕ್ರಮದ ವ್ಯಾಪ್ತಿಯಲ್ಲಿ ಮಿತಿ ಮುಂತಾದುವುಗಳು.

ಮೇಲಿನ ಅಂಶಗಳಲ್ಲದೆ ಕಾರ್ಯಕ್ರಮದ ಜಾರಿಯಲ್ಲಿನ ವೈಫಲ್ಯಕ್ಕೆ ಎರಡು ಮುಖ್ಯ ಕಾರಣಗಳನ್ನು ಗುರುತಿಸಬಹುದು. ಅವೆಂದರೆ, ಅಧಿಕಾರಶಾಹೀ ವ್ಯವಸ್ಥೆ ಮತ್ತು ಎಲ್ಲಾ ಹಂತಗಳಲ್ಲಿ ರಾಜಕೀಯ ಪ್ರಭಾವ.

ಅರ್ಹ ಅಭ್ಯರ್ಥಿಗಳನ್ನು ಗುರುತಿಸುವಲ್ಲಿ ಅಧಿಕಾರಶಾಹೀ ವ್ಯವಸ್ಥೆ ಸೋಲುತ್ತದೆ. ಕಾರಣ, ಸಿಬ್ಬಂದಿ ವರ್ಗದ ಕೊರತೆ, ಪ್ರಾಮಾಣಿಕ ಕಳಕಳಿಯ ಕೊರತೆ, ಸಾಮಾಜಿಕ-ಆರ್ಥಿಕ ಪರಿಸರ ಜ್ಞಾನದ ಕೊರತೆ, ಸಾಮಾನ್ಯ ಜನರೊಂದಿಗೆ ಬೆರೆಯಲಾಗದಂಥ ತಾವೇ ಹಾಕಿಕೊಂಡ ಸುಳ್ಳುಮೌಲ್ಯಗಳ ದಿಗ್ಬಂಧನಗಳು ಮುಂತಾದುವು. ಇವುಗಳಿಂದಾಗಿ ಅರ್ಹ ವ್ಯಕ್ತಿಗಳ ಗುರುತಿಸುವಿಕೆಯಲ್ಲಿ ಇತರರನ್ನು ಅವಲಂಬಿಸುವ ಅಧಿಕಾರಿಗಳು ಸ್ಥಳೀಯ ನಾಯಕರ, ರಾಜಕಾರಣಿಗಳ ಪ್ರಭಾವಕ್ಕೊಳಗಾಗುತ್ತಾರೆ. ಇಂಥ ನಾಯಕರೇ ಅರ್ಹ ವ್ಯಕ್ತಿಗಳನ್ನು ಗುರುತಿಸುವ ಏಜೆಂಟರಾಗುತ್ತಾರೆ. ಇವರ ಕೃಪಕಟಾಕ್ಷಕ್ಕೊಳಗಾದವರು ಅರ್ಹವ್ಯಕ್ತಿಗಳಾಗುತ್ತಾರೆ. ಇಲ್ಲೇ ಭ್ರಷ್ಟಾಚಾರ, ವಂಚನೆ, ಪಕ್ಷಪಾತಗಳು ತಲೆ ಹಾಕುತ್ತವೆ. ಅನರ್ಹ ವ್ಯಕ್ತಿಗಳೂ ಸರಕಾರೀ ಸೌಲಭ್ಯಗಳಿಗೆ ಹಕ್ಕುದಾರರಾಗುವ ಸಂದರ್ಭಗಳೇ ಹೆಚ್ಚಾಗುತ್ತವೆ. ಇವು ಇಡೀ ವ್ಯವಸ್ಥೆಯಲ್ಲಿನ ಲೋಪದೋಷಗಳು. ಇವುಗಳ ನಿವಾರಣೆಯಾಗದ ಹೊರತು ಯಾವುದೇ ಕಾರ್ಯಕ್ರಮ ತನ್ನ ಗುರಿ ಮುಟ್ಟುವುದು ಕನಸಿನ ಮಾತಾಗುತ್ತದೆ.

ಅಲ್ಲದೆ ಕೆಲವು ಕಾರ್ಯಕ್ರಮಗಳ ಔಚಿತ್ಯವನ್ನು

ಪುನರ್ವಿಮರ್ಶಿಸುವುದು ಅತ್ಯಗತ್ಯವೆನಿಸುತ್ತದೆ. ಅವು ಎಷ್ಟು ಪರಿಣಾಮಕಾರಿ ಹಾಗೂ ಸಂದರ್ಭೋಚಿತವೆನ್ನುವುದನ್ನು ಆಗಾಗ್ಗೆ ಪರಿಶೀಲಿಸುವುದು ಅಗತ್ಯ. ಉದಾಹರಣೆಗೆ, ಹೊಲಿಗೆ ತರಬೇತಿ ಕೊಡುವ ಯೋಜನೆಯಿಂದ ತರಬೇತಿ ಪಡೆದ ಮಹಿಳೆಯರು ಆರ್ಥಿಕ ಸ್ವಾವಲಂಬನೆ ಪಡೆಯುತ್ತಾರೆನ್ನುವುದು ಹುಂಬತನವಾಗುತ್ತದೆ. ಗಲ್ಲಿಗೆ ಹತ್ತು ಮಂದಿ ಹೊಲಿಗೆ ತರಬೇತಿ ಪಡೆದರೆ ಅವರೆಲ್ಲರಿಗೆ ಕೈತುಂಬಾ ಕೆಲಸ ಕೊಡುವವರ‍್ಯಾರು? ಪ್ರಚಾರ ಕಾರ್ಯ ನಡೆಸುವವರ‍್ಯಾರು? ಇವರು ಪಡೆಯುವ ನೈಪುಣ್ಯವಾದರೂ ಯಾವ ಮಟ್ಟದ್ದು?—ಮುಂತಾದ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಅನಿವಾರ್ಯ. ಈ ಹಂತದಲ್ಲಿ ಸರಕಾರ ಮಹಿಳಾ ಅಭಿವೃದ್ಧಿಗೆ ಸಂಬಂಧಿಸಿದಂತೆ ಅಪ್ರಾಮಾಣಿಕ ಕಾಳಜಿ ತೋರುವುದನ್ನು ಬಿಟ್ಟು ಆತ್ಮಶೋಧನೆ ಮಾಡಿಕೊಳ್ಳಬೇಕಾಗಿದೆ. ಈ ಸಂದರ್ಭದಲ್ಲಿ ಐ.ಎ.ಎಸ್. ಅಧಿಕಾರಿ ಶ್ರೀಮತಿ ಶೋಭಾ ನಂಬೀಶನ್‌ರವರು ಇತ್ತೀಚೆಗೆ ವಿಚಾರಗೋಷ್ಠಿಯೊಂದರಲ್ಲಿ ಎತ್ತಿದ ಪ್ರಶ್ನೆ ವಿಚಾರಾರ್ಹವಾಗಿದೆ. 'ಜನಸಂಖ್ಯೆಯ ಸುಮಾರು ಅರ್ಧದಷ್ಟಿರುವ ಮಹಿಳೆಯರ ಅಭಿವೃದ್ಧಿಗಾಗಿ ಒಂದು ಇಲಾಖೆ ಶ್ರಮಿಸುವುದು ಎಷ್ಟು ಕಾರ್ಯಸಾಧ್ಯ, ಸಮಂಜಸ? ಯಾವುದೇ ಅಭಿವೃದ್ಧಿ ಯೋಜನೆ ವಿವಿಧ ದಿಕ್ಕುಗಳಿಂದ ಅರ್ಹ ಮಹಿಳೆಯರಿಗೆ ತಲುಪುವಂತಿರಬೇಕು' ಎನ್ನುತ್ತಾರೆ.

ಕೊನೆಯದಾಗಿ ಹೇಳಬೇಕೆಂದರೆ, ಅಭಿವೃದ್ಧಿ ಯೋಜನೆಗಳ ಆಯಾ ಪ್ರದೇಶದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಗಳನ್ನು ಆಧಾರಿಸಿರಬೇಕಾಗುತ್ತದೆ. ಇವುಗಳನ್ನು ರೂಪಿಸುವ ಸಂದರ್ಭದಲ್ಲಿ ಸ್ವಯಂ ಸೇವಾ ಸಂಸ್ಥೆಗಳೂ ಹಾಗೂ ಮಹಿಳಾ ಗುಂಪುಗಳ ಸಲಹೆ ಪಡೆಯುವುದು ಸೂಕ್ತ. ಅಂತೆಯೇ ಹಾಗೆ ರೂಪಿಸಿದ ಯೋಜನೆಗಳ ಜಾರಿಯಲ್ಲಿ ತಾತ್ವಿಕ ಹಾಗೂ ಅನುಷ್ಠಾನಗಳ ಹಿನ್ನೆಲೆಯುಳ್ಳ ಸಂಘ ಸಂಸ್ಥೆಗಳನ್ನು ಗುರುತಿಸಿ ಅವುಗಳ ನೆರವನ್ನು ಪಡೆಯುವುದು ಹೆಚ್ಚು ಸೂಕ್ತ. ಇದಕ್ಕೆ ತಗಲುವ ಹೆಚ್ಚಿನ ಹಣಕಾಸಿನ ಹೊರೆಯನ್ನು ಸರಕಾರ ಭರಿಸಬೇಕಾಗುತ್ತದೆ. ಇಲ್ಲವಾದಲ್ಲಿ ಮಹಿಳೆಯರ ಸ್ಥಿತಿಗತಿಯಲ್ಲಿ ಯಾವುದೇ ಬದಲಾವಣೆ ಕನಸಿನ ಮಾತಾಗುತ್ತದೆ; ವಸ್ತುಸ್ಥಿತಿ ಹೀಗೆ ಮುಂದುವರಿಯುತ್ತಿರುತ್ತದೆ.

---

## ಅಂದು ಇಂದಿನ ಹೆಣ್ಣು

**ಸುಶೀಲಾ ವಿ. ಬಾಳಿಗಾ**

### ಅಂದಿನ ಹೆಣ್ಣು

ಶತಮಾನದಿ ದಾಸ್ಯ
ಭಾವದಿ ನೊಂದವಳೆ
ಬರಲಾರೆ ಏಕ ನೀ
ಬಲೆಯಿಂದ ಈಚೆ ॥

ಸಂಸಾರ ದೆಳೆಗಳ
ಸುಳಿಗೆ ಸಿಲುಕಿದ ನಿನಗೆ
ಹೊರಬರುವ ಕಾತುರ
ಬರಲಾರದಾತುರ ॥

ಪುರುಷನೆಳೆದ ರೇಖೆ
ಲಕ್ಷ್ಮಣ ರೇಖೆ
ಅಡಿಯ ಮುಂಡಿಡೆ ಬೆಂಕಿ
ಹೊತ್ತಿ ಹೊಗೆ ಕಾರುವುದು ॥

### ಇಂದಿನ ಹೆಣ್ಣು

ಪಾಕೀಟು ತುಂಬಾ
ಹಣ ತರುವ ನಿನಗೆ
ಒಳ ಹೊರಗೆ ದುಡಿಮೆ
ಬರಿ ಸುಖದ ಕಲ್ಪನೆ ॥

ಮನೆಯ ಒಳಗಿರೆ ಬಯಸೆ
ಹೊರಗೆ ದುಡಿದ್ಹಣ್ಣಾವ್ವೆ
ಅಂತರ್ಯುದೆದೆಗುದಿಗೆ
ಬೆಂದು ಬಸವಳಿವೆ ॥

ನೀತಿ ಚೌಕಟ್ಟಿನಲಿ
ಬೆಳೆದ ನಿನ್ನಯ ಮನಕೆ
ಪಕ್ವಸ್ಥಿತಿ ಬಂದಿಲ್ಲ
ಬಲೆಯಿಂದ ಹಾರಲು

# ಚಿಮಣಿ ಎಣ್ಣೆ ನಾತ

ಅಮೃತಾ ಪ್ರೀತಂ

ಹೊರಗೊಂದು ಕುದುರೆ ಕೆನೆಯಿತು. ಕೆನೆತ ಗುರುತು ಹಿಡಿದು ಗುಲೇರಿ ಮನೆಯಿಂದ ಹೊರಗೆ ಓಡಿದಳು. ಅವಳ ತೌರುಮನೆ ಕುದುರೆ! ತನ್ನ ಅಪ್ಪನ ಮನೆಯ ಬಾಗಿಲೋ ಎನ್ನುವಂತೆ ಕುದುರೆಯ ಕುತ್ತಿಗೆಗೆ ತಲೆಯೊತ್ತಿ ಸವರಿದಳು.

ಗುಲೇರಿಯ ತಾಯಿತಂದೆ ಚಂಬಾದವರು. ಚಂಬಾ ಗಂಡನ ಮನೆಯಿಂದ ಕೆಲವು ಮೈಲಿ ದೂರದಲ್ಲಿತ್ತು. ಗಂಡನ ಹಳ್ಳಿ ಎತ್ತರದಲ್ಲಿದ್ದು, ಅವಳ ಹಳ್ಳಿಗೆ ಹೋಗುವ ದಾರಿ ತಿರುವಿನಿಂದ ಕೂಡಿದ್ದು ಇಳಿಜಾರಾಗಿತ್ತು. ಇಲ್ಲಿ ಎತ್ತರದ ತುದಿಯಿಂದ ನೋಡಿದರೆ, ಚಂಬಾ ಕಾಲಡಿ ಅಷ್ಟು ದೂರದಲ್ಲಿ ಮಲಗಿದ್ದಂತಿತ್ತು. ತೌರಿನ ತವಕ ಶುರುವಾದರೆ ಗುಲೇರಿ, ಗಂಡ ಮನಕ್‌ನನ್ನು ಕರೆದುಕೊಂಡು ಗುಡ್ಡದ ತುದಿಗೆ ಹೋಗುತ್ತಿದ್ದಳು. ಸೂರ್ಯನ ಬೆಳಕಲ್ಲಿ ಹೊಳೆಯುತ್ತಿದ್ದ ಚಂಬಾದ ಮನೆಗಳನ್ನು ನೋಡಿ, ಹೆಮ್ಮೆಯಿಂದ ಬೀಗುವ ಹೃದಯ ಹೊತ್ತು ಹಿಂತಿರುಗುತ್ತಿದ್ದಳು.

ಪ್ರತಿವರ್ಷ ಸುಗ್ಗಿಕಾಲದಲ್ಲಿ, ಹಲವಾರು ದಿನ ತೌರಿನಲ್ಲಿ ಕಳೆಯಲು ಗುಲೇರಿಗೆ ಗಂಡನ ಮನೆ ಅಪ್ಪಣೆ ಇತ್ತು. ಬೇರೆ ಹಳ್ಳಿಗಳಿಗೆ ಮದುವೆಯಾಗಿ ಹೋದ ಅವಳ ಗೆಳತಿಯರಿಬ್ಬರು ಸುಗ್ಗಿ ಕಾಲಕ್ಕೆ ಊರಿಗೆ ಬರುತ್ತಿದ್ದರು. ಸುಗ್ಗಿಯ ಸಮಯಕ್ಕಾಗೇ ಹುಡುಗಿಯರು ಕಾತರಿಸುತ್ತಿದ್ದರು. ದಿನವು ಗಂಟೆಗಟ್ಟಲೆ ತಮ್ಮ ನೋವು ನಲಿವುಗಳ ಅನುಭವ ಕುರಿತು ಮಾತನಾಡುತ್ತಿದ್ದರು. ಒಟ್ಟೊಟ್ಟಿಗೆ ಬೀದಿಯಲ್ಲಿ ತಿರುಗುತ್ತಿದ್ದರು. ಸುಗ್ಗಿ ಹಬ್ಬಕ್ಕೆಂದು ಹೊಸಬಟ್ಟೆ ಹೊಲಿಸಿಕೊಳ್ಳುತ್ತಿದ್ದರು. ದುಬ್ಬಟಗಳಿಗೆ ರಂಗು ತುಂಬಿ, ಗಂಜಿಹಾಕಿ, ಅಭ್ರಕ ಚಿಮುಕಿಸುತ್ತಿದ್ದರು. ಗಾಜಿನ ಬಳೆಗಳು, ಬೆಳ್ಳಿ ಕಿವಿಯೋಲೆಗಳನ್ನು ಕೊಳ್ಳುತ್ತಿದ್ದರು.

ಗುಲೇರಿ, ಯಾವಾಗಲೂ ಸುಗ್ಗಿಗಾಗಿ ದಿನ ಕಾಯುತ್ತಿದ್ದಳು. ಮುಂಗಾರು ಮೋಡಗಳಿಂದ ತುಂಬಿದ ಆಕಾಶವನ್ನು ಶರತ್ಕಾಲದ ಗಾಳಿಯು ಶುಭ್ರಗೊಳಿಸುವಾಗ ಚಂಬಾದ ತೌರುಮನೆ ಯೋಚನೆ ಗುಲೇರಿಗೆ. ದಿನನಿತ್ಯದ ಕೆಲಸಕ್ಕೆ ಹೊರಡುವಳು. ದನಗಳಿಗೆ ಮೇವು ಹಾಕಿ, ಅತ್ತೆ ಮಾವನಿಗೆ ಅಡುಗೆ ಮಾಡಿಟ್ಟು, ಕೂತು ಮನದಲ್ಲಿ ಲೆಕ್ಕ ಹಾಕುವಳು ತೌರಿನಿಂದ ಯಾರಾದರು ಬಂದು ಕರೆದುಕೊಂಡು ಹೋಗಲು ಇನ್ನೆಷ್ಟು ಸಮಯ ಬೇಕೋ? ಎಂದು.

ಮತ್ತೆ ತೌರಿಗೆ ಹೋಗುವ ಸಮಯ ಬಂದಿದೆ! ಕುದುರೆಯನ್ನು ಖುಷಿಯಿಂದ ಸವರಿದಳು. ತಂದೆ ಕಳುಹಿಸಿದ ಆಳು ನಾತುನನ್ನು ಬರಮಾಡಿಕೊಂಡಳು. ಮರುದಿನ ಹೊರಡಲು ಎಲ್ಲ ಸಿದ್ಧತೆ ಮಾಡಿಕೊಂಡಳು. ಗುಲೇರಿಯ ಸಡಗರ ಸಂಭ್ರಮಗಳಿಗೆ ಮಾತುಗಳಿರಲಿಲ್ಲ. ಮುಖಭಾವವೇ ಸಡಗರದಿಂದ ತುಳುಕುತ್ತಿತ್ತು. ಗುಲೇರಿಯ ಗಂಡ ಮನಕ್ ಹುಕ್ಕ ಎಳೆಯುತ್ತ ಕಣ್ಣು ಮುಚ್ಚಿದ. ತಂಬಾಕು ರುಚಿಸಲಿಲ್ಲವೋ ಇಲ್ಲ ಹೆಂಡತಿಯ ಮುಖ ನೋಡಲು ಧೈರ್ಯವಿಲ್ಲವೋ ಎನ್ನುವಂತಿತ್ತು ಮುಖಭಾವ.

"ಚಂಬಾದ ಜಾತ್ರೆಗೆ ನೀನು ಬರಬೇಕು, ಬರುವೆಯಲ್ಲವೇ? ಒಂದೇ ದಿನದ ಮಟ್ಟಿಗಾದರು ಬಾ" ಎಂದು ಗಂಡನನ್ನು ಪುಸಲಾಯಿಸಿದಳು.

ಮನಕ್ ಹುಕ್ಕ ಬದಿಗಿಟ್ಟ, ಉತ್ತರಿಸಲಿಲ್ಲ.

"ಯಾಕೆ ಏನೂ ಉತ್ತರ ಕೊಡಲಿಲ್ಲ?" ಮುನಿಸು ತೋರಿದಳು ಗುಲೇರಿ. "ನಾನೊಂದು ವಿಶಯ ಹೇಳಲಾ ನಿನಗೆ?" ಎಂದಳು.

"ನೀನೇನೇಳುವೆ ಎಂದು ಗೊತ್ತು; ವರ್ಷಕ್ಕೊಂದೇ ಬಾರಿ ಅಮ್ಮನ ಮನೆಗೆ ಹೋಗುವುದು, ಅದನ್ನು ನೀನೆಂದು ತಡೆದಿಲ್ಲವೆಂದು."

"ಹಾಗಾದ್ರೆ ಈ ಸಲ ಯಾಕೆ ತಡೆಯುತ್ತಿದ್ದೀಯಾ?" ತಗಾದೆ ಮಾಡಿದಳು

"ಇದೊಂದೆ ಒಂದು ಸಲ" ಬೇಡಿದ ಮನಕ್.

"ನಿಮ್ಮಮ್ಮ ಏನೂ ಹೇಳಲಿಲ್ಲ, ನೀ ಯಾಕೆ ಅಡ್ಡಿ ಮಾಡುತ್ತೀಯಾ ?" ಗುಲೇರಿ ಮಕ್ಕಳಂತೆ ಹಠ ಮಾಡಿದಳು.

"ನನ್ನ ಅಮ್ಮ....." ಮಾತು ಮುಗಿಸದೆ ಹಾಗೆ ನಿಲ್ಲಿಸಿದ ಮನಕ್.

ಗುಲೇರಿ, ಕಾದು ಕೂತಳು ಬೆಳಗಿಗೆ, ಹೊತ್ತು ಮೂಡುವ ಮೊದಲೇ ಸಿದ್ಧಳಾದಳು. ಮಕ್ಕಳಿರದ ಅವಳಿಗೆ, ಮಕ್ಕಳನ್ನು ಅತ್ತೆ ಮಾವನ ಬಳಿ ಬಿಡಲೆ ? ಜೊತೆಯಲ್ಲಿ ಕರೆದೊಯ್ಯಲೇ ಎಂಬ ತಲೆ ನೋವಿರಲಿಲ್ಲ. ಹೊರಡುವೆನೆಂದು ಅತ್ತೆ ಮಾವರಿಗೆ ಹೇಳಿದಳು. ಅವರು ತಲೆನೇವರಿಸಿ ಹರಸಿದರು. ನಾತು ಕುದುರೆಗೆ ಜೀನು ಹಾಕಿದ.

"ಸ್ವಲ್ಪ ದೂರ ನಿನ್ನೊಟ್ಟಿಗೆ ಬರುವೆ" ಎಂದ ಮನಕ್.

ಸಂತೋಷದಿಂದ ಉಬ್ಬಿದಳು ಗುಲೇರಿ. ದುಪ್ಪಟದ ಮರೆಯಲ್ಲಿ ಮನಕ್‌ನ ಕೊಳಲನ್ನು ಬಚ್ಚಿಟ್ಟು ಕೊಂಡಿದ್ದಳು.

ಖಜೀರ ಹಳ್ಳದಾಟಿದ ಮೇಲೆ ಚಂಬಾಗೆ ಹೋಗುವ ದಾರಿ ಇಳಿಜಾರಾಗಿತ್ತು. ದುಪ್ಪಟದ ಮರೆಯಲ್ಲಿ ಇಟ್ಟಿದ್ದ ಕೊಳಲನ್ನು ಮನಕ್‌ಗೆ ಕೊಟ್ಟಳು ಗುಲೇರಿ. ಗಂಡನ ಕೈಹಿಡಿದು ಹೇಳಿದಳು

"ಈಗೊಂದು ಸಲ ಕೊಳಲೂದು." ತನ್ನದೆ ಚಿಂತೆಯಲ್ಲಿ ಮುಳುಗಿದ್ದ ಅವನು ಗಮನ ಕೊಡಲಿಲ್ಲ. "ಕೊಳಲೇಕೆ ಊದಲ್ಲ? " ಪುಸಲಾಯಿಸಿದಳು ಗುಲೇರಿ. ವಿಷಾದದಿಂದ ಅವಳತ್ತ ನೋಡಿದ ಮನಕ್. ಕೊಳಲನ್ನು ತುಟಿಗೊತ್ತಿ ಯಾವುದೋ ವಿಚಿತ್ರ ವೇದನೆಯ ದನಿ ಹೊರಡಿಸಿದ.

"ಹೊರಟು ಹೋಗಬೇಡ ಗುಲೇರಿ" ಎಂದು ಬೇಡಿಕೊಂಡ. "ಈ ಸಾರಿ ಹೋಗಬೇಡ ನೀನು" ಎಂದು ಮತ್ತೆ ಕೇಳಿ ಮಾತು ಮುಂದುವರೆಸಲಾಗದೆ ಕೊಳಲು ಹಿಂತಿರುಗಿಸಿದ.

"ಅದ್ಯೆ ಯಾಕೆ ?" ಅವಳು ಕೇಳಿದಳು. "ಜಾತ್ರೆ ದಿನ ನೀನೂ ಬಾ, ಬರುವಾಗ ಒಟ್ಟಿಗೆ ಬರೋಣ, ಖಂಡಿತವಾಗು ನಾನು ಹಿಂದೆ ಉಳಿಯುವುದಿಲ್ಲ."

ಮತ್ತೆ ಕೇಳಲಿಲ್ಲ ಮನಕ್.

ರಸ್ತೆ ಬದಿಯಲ್ಲಿ ಇಬ್ಬರೂ ನಿಂತರು. ಅವಳು ಒಟ್ಟಿಗಿರಲೆಂದು ನಾತು, ಕುದುರೆಯೊಂದಿಗೆ ನಾಲ್ಕೆಜ್ಜೆ ಮುಂದೆ ಹೋದ. ಮನಕ್‌ನ ಮನಸಿನೊಳಗೆ ನೆನಪುಗಳು ಸುಳಿದು ಹೋದವು. ಏಳು ವರ್ಷಗಳ ಹಿಂದೆ, ಇದೆ ಸಮಯಕ್ಕೆ ಗೆಳೆಯರೊಟ್ಟಿಗೆ ಅವನು ಹಬ್ಬಕ್ಕೆಂದು ಈ ದಾರಿಯಲ್ಲೆ ಚಂಬಾಗೆ ಹೊರಟಿದ್ದನು. ಆ ಜಾತ್ರೆಯಲ್ಲೇ ಗುಲೇರಿಯನ್ನು ಮೊದಲಸಲ ನೋಡಿದ್ದು. ಹೃದಯಗಳು ಬದಲಾಗಿದ್ದವು. ಹೇಗೊ ಒಬ್ಬಳೆ ಇರುವಾಗ ನೋಡಿ ಅವಳ ಕೈಹಿಡಿದು ಹೇಳಿದ್ದನ್ನು ನೆನಪಿಸಿಕೊಂಡ ಮನಕ್ "ಇನ್ನೂ ಮಾಗದ, ಹಾಲು ತುಂಬಿಕೊಂಡ ಜೋಳದ ತೆನೆಯಂತಿದ್ದೀಯಾ."

ಕೈಕೊಡವಿಕೊಳ್ಳುತ್ತ ಹೇಳಿದ್ದಳು ಗುಲೇರಿ "ದನಗಳು ಮಾಗದ ಜೋಳಕ್ಕೆ ಹೋಗುವುದು, ಮನುಷ್ಯರಿಗೆ ಹುರಿದ್ದದ್ದು ಇಷ್ಟ, ನಾನು ಬೇಕೆಂದರೆ ನನ್ನ ಕೈಹಿಡಿಯಲು ಅಪ್ಪನನ್ನು ಹೋಗಿ ಕೇಳು" ಎಂದು.

ಮನಕ್‌ನ ಜಾತಿಯಲ್ಲಿ ಮದುವೆಗೆಮುನ್ನ ವಧುದಕ್ಷಿಣೆಯನ್ನು ನಿಶ್ಚಯಿಸಬೇಕಾಗಿತ್ತು. ಗುಲೇರಿಯ ಅಪ್ಪ ಎಷ್ಟು ಕೇಳುವನೊ ಎಂದು ಹೆದರಿದ್ದ. ಗುಲೇರಿಯ ಅಪ್ಪ ಸ್ಥಿತಿವಂತ, ಪೇಟೆಯಲ್ಲಿದ್ದು ಬಂದವ. ಒಳ್ಳೆಯ ಮನೆಯ ಹುಡುಗನಿಗೆ ಮಗಳನ್ನು ಕೊಡುವುದು, ಹಣ ತೆಗೆದು ಕೊಳ್ಳುವುದಿಲ್ಲವೆಂದು ನಿರ್ಧಾರ ಮಾಡಿದ್ದ. ಮನಕ್, ಒಳ್ಳೆ ಹುಡುಗನೆಂದು ಮಗಳನ್ನು ಕೊಡಲು ಒಪ್ಪಿದ. ಸ್ವಲ್ಪದರಲ್ಲೆ ಗುಲೇರಿ ಮನಕ್ ಮದುವೆಯಾದರು. ನೆನಪಿನಲ್ಲಿ ಮುಳುಗಿದವನನ್ನು ಭುಜದ ಮೇಲೆ ತಟ್ಟಿ ಎಚ್ಚರಿಸಿದಳು ಗುಲೇರಿ.

"ಏನು ಕನಸು ಕಾಣುತ್ತಿದ್ದೀಯಾ" ಎಂದು ಅವನನ್ನು ಅಲುಗಿಸಿದಳು. ಮನಕ್ ಉತ್ತರಿಸಲಿಲ್ಲ. ಕುದುರೆ ಅಸಹನೆಯಿಂದ ಕೆನೆಯಿತು. ಮುಂದಿನ ಪಯಣದ ಬಗ್ಗೆ ಯೋಚಿಸುತ್ತಾ ಹೊರಡಲನುವಾದಳು ಗುಲೇರಿ. "ಇಲ್ಲಿಂದ ಒಂದೆರಡು ಮೈಲುದೂರದ ನೀಲಿಗಂಟೆಯ ಕಾಡು ಗೊತ್ತಾ ನಿನಗೆ?" ಎಂದು ಕೇಳಿದಳು. "ಅಲ್ಲಿಗೆ ಹೋದವರೆಲ್ಲಾ ಕಿವುಡರಾಗುತ್ತಾರೆಂದು ಹೇಳುತ್ತಾರೆ"

"ಹೌದು"

"ನೀನೇನೊ ಕೇಳಿಸಿಕೊಳ್ಳದಿರುವುದನ್ನು ನೋಡಿದರೆ, ನೀನು ಆ ಕಾಡಿಗೆ ಹೋಗಿದ್ದೆಯೇನೋ ಅನ್ನಿಸುತ್ತಿದೆ ನನಗೆ"

"ನೀ ಹೇಳಿದ್ದು ಸರಿ ಗುಲೇರಿ, ನೀ ಹೇಳುವುದೇನೂ ಕೇಳುತ್ತಿಲ್ಲ ನನಗೆ" ನಿಟ್ಟುಸಿರಿಟ್ಟು ಹೇಳಿದ ಮನಕ್.

"ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡರು, ಒಬ್ಬರು ಇನ್ನೊಬ್ಬರ ಮನದಲ್ಲಿದ್ದನ್ನು ಅರ್ಥಮಾಡಿ ಕೊಳ್ಳಲಿಲ್ಲ."

"ಇನ್ನು ನಾನು ಹೋಗುತ್ತೇನೆ. ನೀನು ಮನೆಗೆ ಹಿಂತಿರುಗು, ಬಹಳಷ್ಟು ದೂರ ಬಂದಿದ್ದೀಯಾ" ಮೆದುವಾಗಿ ಹೇಳಿದಳು ಗುಲೇರಿ.

"ಇಷ್ಟು ದೂರ ನಡೆದು ಬಂದಿದ್ದೀಯಾ, ಕುದುರೆ ಹತ್ತಿ ಕೂತುಕೊ" ಎಂದ ಮನಕ್

"ಇಗೋ ನಿನ್ನ ಕೊಳಲು ತಗೊ"

"ನೀನೇ ತೆಗೆದುಕೊಂಡು ಹೋಗು"

"ಜಾತ್ರೆ ದಿನ ಒಂದು ನುಡಿಸುತ್ತೀಯಾ?" ಮುಗುಳ್ನಕ್ಕು ಕೇಳಿದಳು ಗುಲೇರಿ. ಸೂರ್ಯ ಅವಳ ಕಣ್ಣುಗಳಲ್ಲಿ ಹೊಳೆಯುತ್ತಿದ್ದ. ಮುಖ ತಿರುಗಿಸಿದ ಮನಕ್. ತಬ್ಬಿಬ್ಬಾಗಿ, ಭುಜ ಹಾರಿಸುತ್ತಾ ಚಂಬಾದ ದಾರಿ ಹಿಡಿದಳು ಗುಲೇರಿ. ಮನಕ್ ಮನೆಗೆ ಹಿಂತಿರುಗಿದ.

ಮನೆಯೊಳಗೆ ಬಂದು ಉದಾಸೀನನಾಗಿ ಚಾಪೆಯ ಮೇಲೆ ಮಲಗಿಕೊಂಡ.

"ಎಷ್ಟೊತ್ತು ಹೋಗಿದ್ದೆ ನೀನು" ಅವನ ಅಮ್ಮ ಕೂಗಿದಳು. "ಗುಡ್ಡದ ತುದಿಯವರೆಗೂ ಹೋಗಿದ್ದೆಯಾ?" ಮನಕ್‌ನ ದನಿ ಭಾರವಾಗಿತ್ತು.

"ಮುದುಕಿಯರ ಹಾಗೆ ಯಾಕೆ ಗೊಣಗ್ತೀಯಾ? ಕಿರುಚೋಕೇನು ಒಂದ್ಸಲ"

ಅವನು ಇನ್ನು ಮೌನವಾಗಿದ್ದ.

ಮನಕ್, ಗುಲೇರಿ ಮದುವೆಯಾಗಿ ಏಳು ವರ್ಷಗಳಾಗಿದ್ದವು. ಇನ್ನೂ ಮಕ್ಕಳಾಗಿರಲಿಲ್ಲ. "ಎಂಟು ವರ್ಷ ದಾಟಲು ಬಿಡುವುದಿಲ್ಲ" ಎಂದು ಮನಕ್‌ನ ತಾಯಿ ಗುಟ್ಟಾಗಿ ನಿಶ್ಚಯಿಸಿದ್ದಳು.

ನಿಶ್ಚಯದಂತೆ ಈ ವರ್ಷ ಅವನಿಗೆ ಎರಡನೆ ಹೆಂಡತಿ ತರಲು 500ರೂ ವಧುದಕ್ಷಿಣೆ ಕೊಟ್ಟಿದ್ದಳು. ಹೊಸ ಹೆಣ್ಣನ್ನು ತರಲು, ಗುಲೇರಿ ತೌರಿಗೆ ಹೋಗುವುದನ್ನೇ ಕಾಯುತ್ತಿದ್ದಳು. ಈ ವಿಷಯ ಮನಕ್‌ಗೆ ಗೊತ್ತಿತ್ತು.

ತಾಯಿಗೆ, ಸಂಪ್ರದಾಯಕ್ಕೆ ವಿಧೇಯನಾದ ಮನಕ್‌ನ ದೇಹ ಹೊಸ ಹೆಣ್ಣಿಗೂ ಸ್ಪಂದಿಸಿತು. ಅವನೊಳಗಿನ ಹೃದಯ ಸತ್ತಿತ್ತು.

ಒಮ್ಮೆ ಬೆಳಗಿನ ಹೊತ್ತು ಹುಕ್ಕಾ ಸೇದುತ್ತಾ ಕೂತಿದ್ದ. ಹಳೆಯ ಗೆಳೆಯನೊಬ್ಬ ದಾರಿಯಲ್ಲಿ ಹಾದುಹೋದ.

"ಓ ಭವಾನಿ ಬೆಳಬೆಳಗೆ ಎಲ್ಲಿಗೆ ಹೋಗುತ್ತಿದ್ದೀಯ?"

ಭವಾನಿ ನಿಂತುಕೊಂಡ. ಸಣ್ಣ ಗಂಟೊಂದು ಅವನ ಭುಜದ ಮೇಲಿತ್ತು. ತಪ್ಪಿಸಿಕೊಳ್ಳುವವನಂತೆ "ಹೀಗೆ ಎಲ್ಲಿಗೂ ಇಲ್ಲ" ಎಂದ.

"ಎಲ್ಲಿಗೊ ಹೊರಟಂತಿದೆ" ಎಂದು ಕೂಗಿ "ಹುಕ್ಕ ಸೇದುತ್ತೀಯ" ಎಂದು ಗೆಳೆಯನನ್ನು ಕರೆದ ಮನಕ್.

ಭವಾನಿ ಮಂಡಿಯೂರಿ ಕೂತ, ಮನಕ್‌ನ ಕೈಯಿಂದ ಹುಕ್ಕ ತೆಗೆದುಕೊಂಡ. "ಚಂಬಾದ ಜಾತ್ರೆಗೆ" ಹೋಗುತ್ತಿದ್ದೆನೆಂದು ಕೊನೆಗೂ ಹೇಳಿದ.

ಭವಾನಿಯ ಮಾತುಗಳು ಮನಕ್‌ನ ಹೃದಯವನ್ನು ಸೂಜಿಯಂತೆ ಚುಚ್ಚಿದವು.

"ಈ ದಿನ ಜಾತ್ರೆಯ?"

"ಪ್ರತಿವರ್ಷವೂ ಇದೇ ದಿನವೇ ಜಾತ್ರೆ"ಯೆಂದು ನೀರಸವಾಗಿ ಹೇಳಿದ ಭವಾನಿ. "ನೆನಪಿಲ್ಲವೆ ಏಳು ವರ್ಷದ ಹಿಂದೆ ನಾವಿಬ್ಬರು ಹೋಗಿದ್ದು" ಮುಂದೇನು ಹೇಳದೆ ಕುಳಿತ ಭವಾನಿ. ಅವನ ನಿಂದೆ ಅರಿವಾಗಿ ಮನಕ್‌ಗೆ ಮುಜುಗರವಾಯಿತು. ಭವಾನಿ ಹುಕ್ಕ ಕೆಳಗಿಟ್ಟು ಗಂಟು ತೆಗೆದುಕೊಂಡು ಹೊರಟ. ಕೊಳಲೊಂದು ಗಂಟಿನೊಳಗಿಂದ ತೂರಿಕೊಂಡು ಹೊರ ಬಂದಿತ್ತು. ಹೋಗಿಬರುತ್ತೇನೆಂದು ಹೇಳಿ ಭವಾನಿ ಹೊರಟುಹೋದ. ಅವನು ಕಣ್ಮರೆಯಾಗುವವರೆಗೂ ಮನಕ್‌ನ ದೃಷ್ಟಿ ಕೊಳಲ ಮೇಲಿಂದ ಅಲ್ಲಾಡಲಿಲ್ಲ.

ಮಾರನೆ ದಿನ ಮನಕ್ ಹೊಲದಲ್ಲಿದ್ದ. ಮಧ್ಯಾಹ್ನವಾಗಿತ್ತು. ಭವಾನಿ ಬರುತ್ತಿದ್ದುದು ಕಾಣಿಸಿತು. ಬೇಕೆಂದೇ ಬೇರೆಡೆ ತಿರುಗಿದ ಮನಕ್. ಭವಾನಿಯೊಂದಿಗೆ ಮಾತಾಡುವುದಾಗಲಿ, ಜಾತ್ರೆಯ ಬಗ್ಗೆ ಕೇಳುವುದಾಗಲಿ ಬೇಕಿರಲಿಲ್ಲ ಅವನಿಗೆ. ಭವಾನಿ ಇನ್ನೊಂದು ಕಡೆಯಿಂದ ಬಂದು ಮನಕ್‌ನ ಮುಂದೆ ಕುಳಿತ. ವಿಷಣ್ಣವಾದ ಅವನ ಮುಖ ಆರಿಹೋದ ಕೆಂಡದಂತಿತ್ತು. ನಿರ್ಜೀವ ದನಿಯಲ್ಲಿ "ಗುಲೇರಿ ಸತ್ತುಹೋದಳು" ಎಂದ ಭವಾನಿ.

"ಏನೂ?"

"ನಿನ್ನ ಎರಡನೆ ಮದುವೆ ವಿಷಯ ತಿಳಿದು, ಬಟ್ಟೆಗಳನ್ನು ಚಿಮಿಣಿಎಣ್ಣೆಯಲ್ಲಿ ಅದ್ದಿ ಅವಕ್ಕೆ ಬೆಂಕಿ ಹಚ್ಚಿಕೊಂಡಳಂತೆ"

ನೋವಿನಿಂದ ಮೂಕನಾದ ಮನಕ್, ಬಿಟ್ಟ ಕಣ್ಣು ಬಿಟ್ಟ ಹಾಗೆ ಕೂತಿದ್ದ. ಅವನ ಜೀವವೇ ಉರಿದು ಹೋಗುತ್ತಿದೆಯೆನಿಸಿತು.

ದಿನ ಕಳೆದು ಮತ್ತೆ ಹೊಲದ ಕೆಲಸ ಪ್ರಾರಂಭಿಸಿದ

ಮನಕ್. ಕೊಟ್ಟಾಗ ಉಣ್ಣುತ್ತಿದ್ದ, ಕಣ್ಣುಗಳು ಬರಿದಾಗಿದ್ದವು. ಮುಖ ಕಳೆಗುಂದಿತ್ತು. ಸತ್ತ ಮನುಷ್ಯನಂತಿದ್ದ.

ಅವನ ಎರಡನೆ ಹೆಂಡತಿ "ನಾನು ಅವನ ಹೆಂಡತಿಯಲ್ಲ, ಸುಮ್ಮನೆ ಮದುವೆಯಾದವಳು" ಎಂದು ದೂರಿದಳು. ಕೆಲ ಸಮಯದಲ್ಲೇ ಅವಳು ಬಸುರಾದಳು. ಹೊಸ ಸೊಸೆಯ ಬಗ್ಗೆ ಖುಷಿಗೊಂಡಳು ಮನಕ್‌ನ ಅಮ್ಮ. ಮನಕ್‌ಗೆ ವಿಶಯ ತಿಳಿಸಿದಳು. ಅವನು ಅರ್ಥವಾಗದವನಂತೆ ನೋಡಿದ. ಇನ್ನೂ ಅವನ ಕಣ್ಣುಗಳು ಬರಿದಾಗಿದ್ದವು.

ಸ್ವಲ್ಪ ದಿನ ಗಂಡನ ಮನಸ್ಥಿತಿಯನ್ನು ಸಹಿಸಿಕೊ, ಮಗು ಹುಟ್ಟಿದ ಮೇಲೆ ಅವನ ತೊಡೆಯ ಮೇಲಿಟ್ಟರೆ ಖಂಡಿತ ಬದಲಾಗುತ್ತಾನೆ ಎಂದು ಮನಕ್‌ನ ಅಮ್ಮ ಸೊಸೆಯನ್ನು ಉತ್ತೇಜಿಸಿದಳು.

ಮನಕ್‌ನ ಹೆಂಡತಿಗೆ ಗಂಡು ಮಗುವಾಯಿತು; ಸಂತಸದಿಂದ ಮಗುವಿನ ಮೈತೊಳೆದು, ಒಳ್ಳೆ ಬಟ್ಟೆ ಹಾಕಿ ಮಗನ ತೊಡೆಯ ಮೇಲೆ ಹಾಕಿದಳು ಅಮ್ಮ. ತೊಡೆಯ ಮೇಲಿದ್ದ ಮಗುವನ್ನೆ ನೋಡಿದ ಮನಕ್ ಏನೂ ತಿಳಿಯಲಿಲ್ಲವೆನ್ನುವಂತೆ ಬಹಳ ಹೊತ್ತು ನೋಡಿದ, ಮುಖಭಾವ ಶೂನ್ಯವಾಗಿತ್ತು. ಇದ್ದಕ್ಕಿದ್ದಂತೆ ಬರಿದಾದ ಕಣ್ಣುಗಳಲ್ಲಿ ಭೀತಿ ತುಂಬಿಕೊಂಡು "ಇವನನ್ನು ತೆಗೆದುಕೊಂಡು ಹೋಗಿ! ಇವನು ಚಿಮಿಣಿ ಎಣ್ಣೆನಾತ ಹೊಡೆಯುತ್ತಾನೆ" ಎಂದು ಉನ್ಮಾದಕೊಂಡು ಚೀರತೊಡಗಿದ.

[ಅಮೃತಾ ಪ್ರೀತಂ ಅವರ ಕತೆಗಳ ಅನುವಾದಕರು **ಸರಸ್ವತಿ ದು.**]

---

## ಕಾಯುವವನೆ ಕೊಂದರೆ ?

ಸೊರಬ ಆಗಸ್ಟ್ 3. ಸೊರಬದ ಪೋಲಿಸ್ ಠಾಣೆಯಲ್ಲಿ ಕೆಲಸ ಮಾಡುತ್ತಿರುವ ಪೋಲಿಸ್, ಪೇದೆಯೋರ್ವ ವಿವಾಹಿತ ಗೃಹಿಣಿಯೋರ್ವಳ ಕೈ ಹಿಡಿದುಕೊಂಡು ಅಶ್ಲೀಲ ಶಬ್ಧಗಳಿಂಧ ಬೈಯುತ್ತಾ ಕಪಾಳಕ್ಕೆ ಹೊಡೆದು ದೂಡಿ ಕೆಡವಿ ಗಾಯಗೊಳಿಸಿ ಅವಮಾನಪಡಿಸಿದ ವಿಚಾರ ಇದೇ 3ರಂದು ನಡೆದಿದೆ.

ಶ್ರೀಮತಿ ಲಲಿತಮ್ಮ ರಾಯ್ಕರ್ ಇವರು ಪಿ.ಎಲ್.ಡಿ. ಬ್ಯಾಂಕಿನಲ್ಲಿ ಉದ್ಯೋಗಿಯಾಗಿದ್ದು ಇವರ ಪಕ್ಕದ ಮನೆಯಲ್ಲಿ ಪೋಲಿಸ್ ಪೇದೆ ರಾಮ ಬೋವಿ ವಾಸವಾಗಿರುತ್ತಾರೆ. ನೀರು ಹಿಡಿಯುವ ಬಗ್ಗೆ ಇಬ್ಬರಲ್ಲಿ ಆಗಾಗ್ಗೆ ಕಲಹಗಳಾಗುತ್ತಿದ್ದು ಈ ಹಿಂದೆಯೇ ಲಲಿತಮ್ಮ ಎರಡು ಬಾರಿ ಪೋಲಿಸ್ ಠಾಣಾಧಿಕಾರಿಗಳಲ್ಲಿ ದೂರು ಸಲ್ಲಿಸಿದರೂ ಕೂಡ ಇಲಾಖೆ ಹೆಚ್ಚಿನ ಯಾವ ಕ್ರಮ ತೆಗದುಕೊಂಡಿರಲಿಲ್ಲ ಎಂದು ತಿಳಿದು ಬಂದಿದ.

ಕಳೆದವಾರ ಸಂತೆಗೆ ಹೋಗಿ ಬಂದ ಲಲಿತಮ್ಮನಿಗೆ ತನ್ನ ಮನೆಗೆ ಹೋಗುವ ಬಾಗಿಲಲ್ಲಿ ಅಡ್ಡ ಕಟ್ಟಿ ಕೈಹಿಡಿದು ಕೆನ್ನೆಗೆ ಬಾರಿಸುತ್ತಾ ಮೆಟ್ಟಲಿನಿಂದ ದೂಡಿ ಅವರ ತಲೆಗೆ ಗಾಯಗೊಳಿಸಿದುದನ್ನು ಅಲ್ಲಿ ನೆರೆದ ಜನ ನೋಡಿ ಬಿಡಿಸಿಕೊಂಡಿರುವುದಾಗಿ ತಿಳಿದು ಬಂದಿದೆ. ಈ ಕೃತ್ಯದಲ್ಲಿ ಪೇದೆಯ ಹೆಂಡತಿ ಶ್ರೀಮತಿ ಮಂಜುಳ ಕೂಡ ಪಾಲ್ಗೊಂಡಿರುವುದಾಗಿ ತಿಳಿದು ಬಂದಿದೆ.

ವೈದ್ಯರಿಂದ ಪ್ರಮಾಣ ಪತ್ರ ಪಡೆದು ಪೋಲಿಸ್ ಠಾಣೆಗೆ ದೂರು ನೀಡಲು ಹೋದ ಲಲಿತಮ್ಮನ ಮೇಲೆ ಸುಳ್ಳು ದೂರೊಂದು ನೀಡಿ ತನ್ನ ಮಡದಿ ಮಂಜುಳಾಗೆ ಹೊಡೆದಳು ಎಂದು ಆಪಾದಿಸಲಾಗಿದೆ.

ಪೋಲಿಸ್ ಪೇದೆ ಮಹಿಳೆಯ ಮೇಲೆ ಕೈ ಮಾಡಿದ ಬಗ್ಗೆ ಮಹಿಳಾ ಮಂಡಳಿಗಳು, ಜನ ಜಾಗೃತಿ ವೇದಿಕೆ ತೀವ್ರ ಖಂಡಿಸಿದ್ದು ಕೂಡಲೇ ಕ್ರಮ ತೆಗೆದುಕೊಳ್ಳದಿದ್ದಲ್ಲಿ ಠಾಣೆಯ ಮುಂದೆ ನಿರಶನ ಸತ್ಯಾಗ್ರಹ ಮಾಡುವುದಾಗಿ ಎಚ್ಚರಿಸಿವೆ.

# ಆಕಸ್ಮಿಕ–ಸ್ತ್ರೀಪರ ನಿಲುವಿನ ನೈಜ ಚಿತ್ರಣ

**ರಾಜೇಶ್ವರಿ ಎಚ್. ಎಸ್.**

ಇತ್ತೀಚಿನ ಚಲನ ಚಿತ್ರಗಳಲ್ಲಿ, ಹಠಮಾರಿಯಾದ, ಅಹಂಕಾರದಿಂದ ಕೂಡಿದ, ಗಂಡು ಮನೋಭಾವದ ಸ್ತ್ರೀಯನ್ನು ಪಳಗಿಸುವ, ಅಥವಾ ಮಾಂಗಲ್ಯದ ವೈಭವೀಕರಣ, ಗಂಡ ತನಗೆ ಅನ್ಯಾಯವೆಸಗಿದರೂ ಅವನೇ ತನ್ನ ಆರಾಧ್ಯ ದೇವವೆಂದು ಆರಾಧಿಸುವ ನಾಯಕಿಯಂತಹ 'ಅತಿರೇಕ'ದ ಹಂತದಲ್ಲಿ ಸ್ತ್ರೀಯನ್ನು ಚಿತ್ರಿಸಲಾಗುತ್ತಿದೆ. ಬೇರೆ ಬೇರೆಯಾದರೂ ಒಂದೇ ವಸ್ತುವುಳ್ಳ, ವ್ಯಾಪಾರಿ ಮನೋಭಾವನೆಗಳ ಚಿತ್ರಗಳ ನಡುವೆ, ಸ್ತ್ರೀ ಸಮಸ್ಯೆಯ ಒಂದೆರಡು ಮುಖವನ್ನು ಆರೋಗ್ಯಪೂರ್ಣವಾಗಿ, ನೈಜವಾಗಿ ಚಿತ್ರಿಸುವ 'ಆಕಸ್ಮಿಕ' ಮೆಚ್ಚುಗೆಗೆ ಅರ್ಹವಾದುದು.

ತ.ರಾ.ಸು ಅವರ ಮೂರು 'ಕಾದಂಬರಿಗಳನ್ನಾಧರಿಸಿ ತೆಗೆದ 'ಆಕಸ್ಮಿಕ' ಚಿತ್ರ ಇಬ್ಬರು ಸ್ತ್ರೀಯರ ವಿಶಿಷ್ಟ ಸಮಸ್ಯೆಯ ಸುತ್ತ ಕೇಂದ್ರೀಕರಿಸುತ್ತದೆ. ಈ ಇಬ್ಬರು ಸ್ತ್ರೀಯರ ಸಮಸ್ಯೆಯನ್ನು ವೈಯಕ್ತಿಕ ನೆಲೆಯಲ್ಲಿ ಚಿತ್ರಿಸಲಾದರೂ, ಈ ಸಮಸ್ಯೆಯ ಸಂಕೀರ್ಣತೆಯನ್ನು ಸಾಮಾಜಿಕ ನೆಲೆಯಲ್ಲಿ ಗುರುತಿಸುವ ಪ್ರಯತ್ನವನ್ನು 'ಆಕಸ್ಮಿಕ'ದಲ್ಲಿ ಕಾಣಬಹುದು.

ಕಿತ್ತು ತಿನ್ನುತ್ತಿರುವ ಬಡತನದ ನಡುವೆ ಬೆಳೆದ ಯುವತಿ ಪಕ್ಕದ ಮನೆಯ ವೇಶ್ಯೆಯ ಅಣ್ಣ ಕಣ್ಣಿಗೆ ಬಿದ್ದಾಗ ಅವನು ಅವಳನ್ನು ವೇಶ್ಯಾವೃತ್ತಿಗೆ ಎಳೆಯಲು ಬಲೆ ಬೀಸುತ್ತಾನೆ. ಸುಂದರಳಾದ ಆಕೆ ನಾಟಕ ಕಂಪನಿಗಳಲ್ಲಿ ಹೆಚ್ಚು ಅವಕಾಶ ಪಡೆಯುವುದರ ಮೂಲಕ ಮನೆಯವರಿಗೆ ಆಸರೆಯಾಗಬಹುದೆಂಬ ಆಮಿಷವನ್ನೊಡ್ಡಿ, ಆಕೆಯನ್ನು ಪಟ್ಟಣಕ್ಕೆ ಕರೆದುಕೊಂಡು ಹೊರಡುತ್ತಾನೆ. ಹೀಗೆ ಆಕಸ್ಮಿಕವಾಗಿ ನಾಯಕನ ಕಣ್ಣಿಗೆ ಬೀಳುತ್ತಾಳೆ. ಅದೇ ರೈಲಿನಲ್ಲಿ ಪೋಲಿಸರು ಹುಡುಕುತ್ತಿರುವ ಸುಳಿವು ಅವನಿಗೆ ಸಿಕ್ಕಕೂಡಲೆ, ಪೋಲಿಸರಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ, ಆಕೆಯನ್ನು ನಾಯಕನ 'ಕೈ'ಗೆ ಒಪ್ಪಿಸಿ ಹೋದಂತೆ ನಾಟಕವಾಡಿ, ಪೋಲಿಸರು ಮರೆಯಾದ ಕೂಡಲೇ ಪುನಃ ಅವಳನ್ನು ಬಲತ್ಕಾರವಾಗಿ ಆ ವೃತ್ತಿಗೆ ಎಳೆಯಲು ಪ್ರಯತ್ನಿಸುತ್ತಿರುವಾಗ ನಾಯಕ ಅವಳ್ನ ರಕ್ಷಣೆಗೆ ಪ್ರಯತ್ನಿಸಿಯೂ ವಿಫಲನಾಗುತ್ತಾನೆ. ಅವಳನ್ನು ರಕ್ಷಿಸಲಾಗದೇ, ತನ್ನ ಅಸಹಾಯಕತೆಯ ಕೊರಗಿನಲ್ಲಿ ನಲುಗುತ್ತಿರುವಾಗ ನೊಂದ ಇನ್ನೊರ್ವ ಹೆಣ್ಣನ್ನು ಭೇಟಿಯಾಗುತ್ತಾನೆ.

ಕ್ರಿಶ್ಚಿಯನ್ ಕುಟುಂಬಕ್ಕೆ ಸೇರಿದ ಮದುವೆ ನಿಶ್ಚಯವಾದ ಹೆಣ್ಣೊಬ್ಬಳು ತಾನು ಪ್ರೀತಿಸಿದ ಕೈಹಿಡಿಯಬೇಕಾದ ಗಂಡು ಪಾರ್ಟಿಯೊಂದರಲ್ಲಿ ಆಕೆಯನ್ನು ಕುಡಿಯುವಂತೆ ಪ್ರೇರೇಪಿಸುತ್ತಾನೆ. ಅವನ ಬಲವಂತಕ್ಕೆ ಸೊಪ್ಪುಹಾಕದ ಆಕೆ ತನ್ನ ಗಟ್ಟಿಯಾದ ನಿರ್ಧಾರವನ್ನು ತಿಳಿಸುತ್ತಾಳೆ. ಆಕೆಯ ಗೆಳತಿ, ಅವಳ ನಿಷ್ಟುರ ನಿಲುವನ್ನು ಛೇಡಿಸುತ್ತಾ, ತಾನು ಆತನಿಗೆ ಕಂಪನಿಕೊಡುವುದಾಗಿ ಒಪ್ಪಿ ಅವನೊಂದಿಗೆ ಸ್ನೇಹ ಬೆಳೆಸುತ್ತಾಳೆ.

ತನ್ನ ಕೈಹಿಡಿಯುವವನಿಗೆ ಹೊಲಿಸಿದ ಕೋಟನ್ನು ತಾನೇ ಸ್ವತಃ ಕೊಟ್ಟು ಬರುತ್ತೇನೆಂದು ಸಂತೋಷದಿಂದ ಆತನ ಮನೆಗೆ ಬಂದಾಗ, ಆತ ತನ್ನ ಗೆಳತಿಯೊಂದಿಗಿರುವ ಚಿತ್ರ ಕಂಡು ಆಕೆ ದಿಗ್ಭ್ರಮೆಯಾಗುತ್ತಾಳೆ. ತಾನೇ ಮನಸಾರೆ ಪ್ರೀತಿಸಿದವ ಮೋಸಮಾಡಿದ ಘಟನೆಯಿಂದಾಗಿ ಆಕೆ ತನ್ನ ಮನಸ್ಸಿನ ಸ್ವಾಸ್ಥ್ಯವನ್ನು ಕಳೆದುಕೊಂಡು ಜರ್ಜರಿತಳಾಗುತ್ತಾಳೆ. ಕ್ರಮೇಣ ಕುಡಿತಕ್ಕೆ ಸೆರೆಯಾಗುತ್ತಾಳೆ. ಗಂಡಸರೆಂದರೆ ಭಯಪಡುವ, ದ್ವೇಷಿಸುವ, ಸಿಟ್ಟಿಗೇಳುವ ಪ್ರವೃತ್ತಿ ಅವಳಲ್ಲಿ ಬೆಳೆಯುತ್ತದೆ. ಇಂತಹ ಸಂದರ್ಭವೊಂದರಲ್ಲಿ ಆಕೆಯನ್ನು ಭೇಟಿಯಾಗುವ ನಾಯಕ ಕ್ರಮೇಣ ಅವಳ ವಿಶ್ವಾಸಕ್ಕೆ ಅರ್ಹನಾಗಿ, ಅವಳ ಸ್ನೇಹವನ್ನು ಸಂಪಾದಿಸುತ್ತಾನೆ. ಈ ಸ್ನೇಹ ಮದುವೆಯಲ್ಲಿ ಮುಕ್ತಾಯವಾದರೂ, ನಾಯಕಿ ಕೆಮ್ಮಣ್ಣುಗುಂಡಿಯ ಎತ್ತರದ ಪ್ರದೇಶದಿಂದ ಕೆಳಗೆ ಬಿದ್ದು ಮರಣ ಹೊಂದುತ್ತಾಳೆ.

ಇಬ್ಬರು ಗೆಳತಿಯರನ್ನು ಕಳೆದುಕೊಂಡು ನಾಯಕನ ಮನಸ್ಸಿನಲ್ಲಿ ಈ ಇಬ್ಬರು ಹೆಣ್ಣುಗಳ ಮೇಲೆ ಅನ್ಯಾಯವೆಸಗಿದ ವ್ಯವಸ್ಥೆಯ ಬಗ್ಗೆ ಅಸಹನೆ ಬೆಳೆಯುತ್ತದೆ. ಈ ಸಮಸ್ಯೆಯ ಸುಳಿಯ ಬೇರುಗಳನ್ನು ಕಿತ್ತು ಹಾಕುವ ಉದ್ದೇಶದಿಂದ ಪೋಲಿಸ್ ಇಲಾಖೆಗ ಸೇರಿ ಪೋಲಿಸ್

ಅಧಿಕಾರಿಯಾಗುತ್ತನೆ. ಹಳ್ಳಿಯಿಂದ ಬಂದ ಮುಗ್ಧ ಬಾಲೆಯರನ್ನು ಬಲಿತೆಗೆದುಕೊಳ್ಳುತ್ತಿರುವ ವ್ಯಕ್ತಿಗಳ ಶೋಧಕ್ಕೆ ತೊಡಗುತ್ತಾನೆ. ಕ್ರೂರ ವ್ಯವಸ್ಥೆಯ ಕರಾಳ ಕೈಗಳು ಬೆಳಕಿಗೆ ಬರುತ್ತವೆ. ಆಕೆ, ತಾನು ಸಿಕ್ಕಿ ಹಾಕಿಕೊಂಡ ಅಮ್ಮಾನುಷ ಬಲೆಯಿಂದ ತಪ್ಪಿಸಿಕೊಂಡು ಬರಲು ಕೊಲೆಗಳನ್ನು ಮಾಡುವುದು ಅನಿವಾರ್ಯವಾಗಿ ಮತ್ತೆ ರೈಲಿನಲ್ಲಿ ವ್ಯಕ್ತಿಯೊಬ್ಬನ ಕೊಲೆ ಮಾಡಿ ಓಡಿ ಬರುತ್ತಿರುವ ಸಂದರ್ಭದಲ್ಲಿ ನಾಯಕನನ್ನು ಪುನಃ ಭೇಟಿಯಾಗುತ್ತಾಳೆ.

ಇಬ್ಬರು ವ್ಯಕ್ತಿಗಳು ತಮ್ಮ ಜಗಳದ ನಡುವೆ 'ಸೂಳೇಮಗ' ಎಂದು ಬೈದಾಗ ನಾಯಕ ಅವನನ್ನು ಚೆನ್ನಾಗಿ ಥಳಿಸಿ, ಅವನು ಉಪಯೋಗಿಸಿದ ಪದದ ಬಗ್ಗೆ ಆಕ್ರೋಶಗೊಂಡು ಹೆಂಗಸನ್ನು ಸೂಳೆ ಮಾಡಿದವರು ಯಾರು ? ಗಂಡಸರಲ್ಲವೆ ? ಎಂದು ಕೇಳುತ್ತಾನೆ, ಈ ಘಟನೆ ಕತೆಗೆ ಸಂಬಂಧವಿಲ್ಲವೆನಿಸಿದರೂ ನಾಯಕನ ನಿಲುವನ್ನು ವ್ಯಕ್ತಪಡಿಸಲು ಪೂರಕವಾಗಿದೆ.

ಬಡತನದ ಅಮಾನುಷತೆಯ ತೆಕ್ಕೆಯಲ್ಲಿ ನರಳುತ್ತಾ ತನ್ನ ಕುಟುಂಬಕ್ಕೆ ಆಸರೆಯಾಗುತ್ತೇನೆಂದು ಹೊರಟ ಮುಗ್ಧ ಹೆಣ್ಣು ತಾನು ಮಾಡವ ತಪ್ಪಿಗೆ ಶಿಕ್ಷೆ ಅನುಭವಿಸಬೇಕಾದ ಅನಿವಾರ್ಯತೆ ತನಗೆ ರಕ್ಷಣೆ ಕೊಡಿ ಎಂದು ದೈನ್ಯತೆಯಿಂದ ಕೇಳಿದ್ದರೂ, ರಕ್ಷಿಸಲಾಗದ ನಾಯಕನ ಅಸಹಾಯಕತೆ, ತಾನು ಪ್ರೀತಿಸಿದ, ಅಪಾರ ನಂಬಿಕೆಯನ್ನಿಟ್ಟುಕೊಂಡ, ಜೀವನ ಸಂಗಾತಿಯಾಗಬೇಕಾದವ ಮೋಸ ಮಾಡುವುದು, ಆಕೆ ಗಂಡಸರನ್ನು ದ್ವೇಷಿಸುವುದು, ನಂಬಿಕೆಯನ್ನು ಕಳೆದುಕೊಳ್ಳುವುದು ಸನ್ನಿವೇಶಗಳಿಗೆ ಪೂರಕವಾಗಿವೆ. ವೇಶ್ಯಾ ಸಮಸ್ಯೆಯ ಸುಳಿಯಲ್ಲಿ ಸಿಲುಕಿದ ಹೆಣ್ಣು ತನ್ನ ಆತ್ಮಗೌರವದ ರಕ್ಷಣೆಗಾಗಿ ಎಂಬುದಕ್ಕಿಂತ, ನಾಯಕನಿಗಾಗಿಯೆಂಬಂತೆ, ಸಮಸ್ಯೆಯ ಸುಳಿಯಿಂದ ತಪ್ಪಿಸಿಕೊಂಡು ಬಂದಿದ್ದೇನೆಂದು ಹೇಳುವುದು ಅತಿಶಯವೆನಿಸಿದರೂ ಇಂದಿನ ವ್ಯಾಪಾರಿ ಚಿತ್ರದ ಹಿನ್ನಲೆಯ ಮಿತಿಯಲ್ಲಿ ಅಸಹಜವೆಂದೆನಿಸುವುದಿಲ್ಲ. ರಾಜಕುಮಾರ್‌ರವರ ಮನೋಜ್ಞನ ಅಭಿನಯದ ಜೊತೆಗೆ ಗೀತಾ, ಮಾಧವಿ, ತಮ್ಮ ಪಾತ್ರಗಳಿಗೆ ಶ್ರೀಮಂತಿಕೆಯನ್ನು ತುಂಬಿದ್ದಾರೆ.

ಇಂದು ಕಂಡುಬರುತ್ತಿರುವ ಅಶ್ಲೀಲ ದ್ವಂದ್ವಾರ್ಥದ ಸಂಭಾಷಣೆ, ಸ್ತ್ರೀಪಾತ್ರಗಳನ್ನು ವ್ಯಾಪಾರಿ ಮನೋಭಾವನೆಯಿಂದ ಮಾತ್ರ ಚಿತ್ರಿಸಿ, ನಾಯಕನನ್ನು ಅತಿಯಾಗಿ ವೈಭವೀಕರಿಸುವುದರ ಮೂಲಕ ಸಂಪ್ರದಾಯ ಮೌಲ್ಯಗಳಿಗೆ ಒತ್ತು ನೀಡಿ, ಅವುಗಳನ್ನು ಬಲಪಡಿಸುತ್ತಿರುವ ಚಿತ್ರಗಳ ನಡುವೆ 'ಆಕಸ್ಮಿಕ' ಸ್ತ್ರೀಪರ ನಿಲುವನ್ನು ನೈಜವಾಗಿ ಚಿತ್ರಿಸಿದೆಯೆಂದರೆ ಅತಿಶಯೋಕ್ತಿಯೇನಲ್ಲ.

---

## ಸಂವೇದನೆ

ಘಮಘಮಿಸುವ ಹುಡುಗಿ, ಸೀದು ನಾತ ಹೊಡೆಯುವ ಮೂಟೆಯಾಗಿ ಮಲಗಿದ್ದಳು. ಮಗ್ಗುಲಲ್ಲಿ ಅವಳ ಪುಟಾಣಿ ರಾಜಕುಮಾರ ಪುಟ್ಟ ಮೂಟೆಯೊಳಗೆ ಸುರಟಿ ಹೋಗಿ ವಾಸನೆ ಹೊಡೆಯುತ್ತಿದ್ದ. ಶೀಶಗಟ್ಟಲೆ ಸೆಂಟುಗಳು, after shave lotionಗಳು, ಕಟ್ಟುಗಟ್ಟಲೆ ಊದುಬತ್ತಿಗಳು, ಮಂಜು ಚಪ್ಪಡಿಗಳಿಗೂ ನಿಲ್ಲದೆ ಹೊಡೆಯುತ್ತಿದ್ದ ವಾಸನೆ !

ವಾಸನೆ ಮೂಗು ಗಂಟಲಿಗೆ ಬಡಿದು ಒಡಲ್ಹೊಳಗೆಲ್ಲ ಸುತ್ತುಹೊಡೆಯುತ್ತಿತ್ತು. ಮೈಯ ನರಗಳೆಲ್ಲ ಚೀರಿದವು, ನೀನಾ ಚೇತನಾ ? ಅದೇ ಚೇತನಾನ ನೀನು ? ಇಷ್ಟಿಷ್ಟಗಲ ಪಳಗುಟ್ಟುವ ಕಣ್ಣುಗಳ, ಅರಳು ನಗೆಯ ಹುಡುಗಿ ! ನೀಟಾಗಿ ಡ್ರೆಸ್ ಮಾಡಿಕೊಂಡು, ಮಾರುದ್ದ ಜಡೆಯ ಬಳುಕಿಸಿ ನಡೆದರೊಂದು ಸೊಗಸು. ತಲೆಯಿಂದ ಕಾಲೊರೆಗು ಒನಪೋ ಒನಪು. Chetana you are so pretty ಅಂದ್ರೆ ಒಕುಳಿಯಾಗಿ ಏ-ನಿ-ಲ್ಲ-ಪ್ಪಾ ಅಂತಾ ಒಳಗೊಳಗೆ ಬೀಗುತ್ತಿದ್ದ ನೀ, ನನ್ನೊಳಗಿನ್ನೂ ಜೀವಂತ.

ರಾತ್ರಿ ಊಟ ಮಾಡ್ದೆ ಮಲಗಬಾರ್ದು, ಛಂದರ್ದ ದೋಸೆ ತಿಂದು ಹಾಲು ಕುಡಿದು ಮಲಗಬೇಕು ಗೊತ್ತಾಯ್ತ ಅನ್ನುವ ಸವಿಯಾದ ಗದರಿಕೆಗಳು.

ಹೊರನಾಡಿನಿಂದ ಕಳಸಕ್ಕೆ ನಡೆಯಲಾಗದೆ ಕೂತಾಗ, ಕೈಯ್ಯಲ್ಲೊಂದು ಕಡ್ಡಿ ಹಿಡಿದು ಏಳಿ ಮೇಲೆ ಎಲ್ರೂ, ಒಬ್ರಿಂದೆ ಒಬ್ರು ಲೈನ್ ಮಾಡಿ ನಡೀರಿ, ಹಾಡ್ ಹೇಳ್ತಾ ಹೋದ್ರೆ ನಡ್‌ದದ್ದೆ ಗೊತ್ತಾಗೊಲ್ಲ, ಬಾಲು ಅಣ್ಣ ಬಿಸಿಬಿಸಿಯಾಗಿ ಜಿಲೇಬಿ ತಂದಿರ್‍ತಾನೆ, ದೊಡ್ಡಮ್ಮ ಒಳ್ಳೆ ಮಸಾಲೆ ದೋಸೆ ಮಾಡಿರ್‍ತಾರೆ, ಬೇಗ್ ಬಿಸಿ ಇರೋವಾಗ್ಲೆ ತಿನ್ನಬಹುದು ಅಂತ ಮಕ್ಕಳಂತೆ ಪುಸಲಾಯಿಸಿದ್ದು. ದೋಸೆ ಆಸೆಗೆ ಮರುಳಾಗ್ದೆ ಇದ್ರು ನಿನ್ನ ಮಾತಿನ ಜೇನಿಗೆ ಮರುಳಾಗಿ ಸರಸರ ನಡೆದು ಟೈಂ ಸರಿಯಾಗಿ ಬಸ್ಸು ಹಿಡಿದು ನಾವೆಲ್ಲ ಚಿಕ್ಕಮಗಳೂರು ತಲುಪಿದ್ದು.

ಬೇಲೂರಿನ ಗುಡಿಯ ಅಂಗಳದಲ್ಲಿ ಶಾಂತಲೆಯಾಗಿ 'ಶಿಲೆಗಳು ಸಂಗೀತವಾ ಹಾಡಿವೆ' ಎಂದು ನರ್ತಿಸಿ ಹೊಟ್ಟೆ ತುಂಬಾ ನಕ್ಕಿದ್ದು.

ಅಮಿತಾಬ್ ಬಚ್ಚನ್ ಸಿನಿಮಾ ಮೊದಲ್ನೆ ದಿನವೆ ನೋಡ್ಬೇಕು ಅಂತಾ ಇದ್ದಬದ್ದ ದುಡ್ಡನ್ನೆಲ್ಲಾ ಸೇರಿಸಿ ಸಿನಿಮಾ ನೋಡಿ ಬರೋವಾಗ ಕಾಸಿಲ್ಲದೆ ಮೆಜಸ್ಟಿಕ್‌ನಿಂದ ನಡೆಸಿಕೊಂಡು ಬಂದದ್ದು. ಸರಸರ ಮಾತಾಡೋಕೆ ಬರದ ನೀನು ನಾಟಕದಲ್ಲಿ ಬರೋ fast dialogue 'ಬೆಳ್ಳರಿನಲ್ಲಿರೋ, ಕಳ್ಳರಿಗೆಲ್ಲಾ ಕುಳ್ಳಗಿರೊ ಮೆಳ್ಳೆಗಣ್ಣು' ಅನ್ನೊದನ್ನ ಎಷ್ಟು ಹೇಳಿಕೊಟ್ಟರು ಅಗ್ದೆ ತೊದಲಿ ಕೀಕೀ.... ಅಂತಾ ನಗ್ತಾ ಇದದ್ದು.

ಹೀಗೆ....ನೂರು, ಸಾವಿರ....ಪುಟ್ಟ ಸುಂದರ ಕ್ಷಣಗಳನ್ನು ಬರೀ ನೆನಪಾಗಿಸಿ ಬೂದಿಯಾಕಾದೆ ? ಚೇತನ ! ಚೆಂದದ ಮಗು, ಅಂದವಗಂಡ, ಸೊಗಸಿನ ಮನೆಯ ಕನಸು ಹೊತ್ತ ನಿನಗೆ, ಪಾರ್ಶ್ವನಾದ ಪಾರ್ಶ್ವ ವಾಯುವಿನಂತೆ ಬಡಿದು ನಿಶ್ಚೇತಗೊಳಿಸಿದನಲ್ಲ. ಹೊಲಸು ಹುಳುವಿನೊಳಗೆ ಯಾವ ಸುಗಂಧ ಅರಸುತ್ತಿದ್ದೆ ನೀನು ? ಪ್ರೀತಿಯಿಂದ ರಾಕ್ಷಸನ ಗೆಲ್ಲುವೆನೆಂದು ಪಣ ತೊಟ್ಟೆ ಯಾಕೆ ? ನಿನ್ನ ಸಾವಿನ ವಾಸನೆ ಬಡಿಯಲಿಲ್ಲವಾ ಅವನಿಗೆ ? ನಿನ್ನ ಹನಿ ಪ್ರೀತಿಗೂ ಅರ್ಹನಲ್ಲದ ಅವನಿಗಾಗಿ ಹರಕೆ ಹೊತ್ತೆ ಯಾಕೆ ? ವ್ರತ ಉಪವಾಸ ಯಾಕೆ ಮಾಡಿದೆ ? ಹಣೆಯಲ್ಲೊಂದು, ಬೈತಲೆಯ ತುದಿಗೊಂದು ರಾರಾಜಿಸುವ ಕುಂಕುಮವಿಟ್ಟು ಆ ನೀಚ ಕಟ್ಟಿದ್ದ ತಾಳಿಯ ಮರೆ ದಾಡಿಸಿದ್ದು ಯಾಕೆ ? ಕೊಳೆತು ಹೋದ ಸಂಬಂಧವನ್ನು ಮುಚ್ಚಿಡೋದಕ್ಕಾ ?

ಯಾವನಿಗಾಗಿ ಏನ್ನೆಲ್ಲ ಮಾಡಿ, ಏನೆಲ್ಲ ಸಹಿಸಿಕೊಂಡೆಯೊ ಅವನೇ ಅರಿವಿಗೆ ಬರದಂತೆ ನಿನ್ನ ಕೊಂದು ಸುಟ್ಟನಲ್ಲ ! ಕಣ್ಣಿಗೆ ರಾಚುವ ಈ ಸತ್ಯಕ್ಕೆ ಸಾಕ್ಷಿಗಳು ಬೇಕು. ಸತ್ಯ ತಿರುಚಲು ನಿನ್ನ ಸುಂದರ ನಿನ್ನೆಗಳನ್ನೆಲ್ಲ ಜಾಲಾಡಿ ರಾಡಿ ಮಾಡಲು ಕಾದು ನಿಲ್ಲುವರು 'ಮನುಗಳ' ಕಾನೂನು ಬರೆದ 'ಮನುಗಳು' ನ್ಯಾಯ ದೇವತೆಯ ಕಣ್ಣಿಗೆ ಕಪ್ಪುಬಟ್ಟೆ ಬಿಗಿದರು. ನಿನ್ನಮ್ಮನ ಒಡಲ ಸಂಕಟ ಕಠಿಬಟ್ಟೆ ದಾಟಿ ದೇವತೆಯು ಕಣ್ಣಿಗೆ ಬೀಳದು, ಅವಳ ತಕ್ಕಡಿ ಅಲ್ಲಾಡದು.

ಕೋರ್ಟಿನ ಅಂಕಿ ಅಂಶದೊಳಗೆ ಸೇರಿ, ಧೂಳಿಡಿದು. ಮೌನವಾಗಬೇಡ. ನರಸತ್ತವರ ಎದೆ ಅಲ್ಲಾಡುವಂತೆ, ನ್ಯಾಯಾಧೀಶರ ಕಿವಿ ತಮ್ಮಟೆ ಹರಿದುಹೋಗುವಂತೆ, ನ್ಯಾಯದೇವತೆ ಕಪ್ಪು ಪಟ್ಟಿ ಕಳಚಿ ಹೋಗುವಂತೆ, ನಿನ್ನ, ನಿನ್ನ ಪುಟ್ಟ ಕಂದನ ಸುಟ್ಟ ಕೈಗಳು ಹೊತ್ತಿ ಹೋಗುವಂತೆ ಅರುಚಿ ಬಿಡು ಚೇತನ ! ಇನ್ನೆಷ್ಟೋ ಬೂದಿಯಾಗಲಿರುವ ಚೇತನಗಳಿಗೆ ದನಿಯಾಗಿ ಬಿಡು.

**ಸರಸ್ವತಿ ದು.**

# ನೀಮಾ ಕ್ಯಾಂಪೈನ್

ಯು ಎಸ್‌ನ ರಾಬರ್ಟ್ (ಜೋನಿ) ಲಾರ್‌ಸನ್ ಎಂಬುವರು ಬೇವಿನ ಜೀವಕೀಟನಾಶಕ ಗುಣಗಳನ್ನು ಪೇಟೆಂಟ್ ಮಾಡುತ್ತಿದ್ದಾರೆ ಎಂಬುದು ನಮ್ಮ ಗಮನಕ್ಕೆ ಬಂದಿದೆ (ಪೇಟೆಂಟ್ ಸಂಖ್ಯೆ 4,556,562). ಅತಿ ಪ್ರಾಚೀನದಿಂದಲೂ ಬೇವಿನ ಜೀವಕೀಟನಾಶಕ ಗುಣಗಳನ್ನು ಕಂಡುಕೊಂಡು ಉಪಯೋಗಿಸುತ್ತಲೇ ಬಂದಿರುವ ಭಾರತೀಯ ಜನರ ಸಹಜವಾದ ಸಾಂಸ್ಕೃತಿಕ ಮತ್ತು ಬೌದ್ಧಿಕ ಪರಂಪರೆಯನ್ನು ಲಾರ್‌ಸನ್ ಪೇಟೆಂಟ್ ಮಾಡಿ ತನ್ನ ಖಾಸಗಿ ಸ್ವತ್ತನ್ನಾಗಿ ಮಾಡಿಕೊಂಡಿದ್ದಾರೆ ಎಂಬಂಶವನ್ನು ಇಲ್ಲಿ ಸುಖವಾಗಿ ಕಡೆಗಣಿಸಲಾಗಿದೆ.

ಇದರ ಜತೆಗೆಯೇ ಲಾರೆನ್ಸ್ ತನ್ನ ಪೇಟೆಂಟನ್ನು W.R. ಗ್ರೇಸ್ ಅಂಡ್ ಕಂ., U.S.A.ಗೆ $ 15,000 ನಗದಿಗೆ, ರಾಯಲ್ಟಿಯ 5% ಮತ್ತು ವಿದೇಶೀ ಪರವಾನಗಿ ಫೀಸಿನ 50% ಮಾರಾಟ ಮಾಡಿದ್ದಾರೆ.

U.S.A.ಯ ಡಾ॥ ಜೇಮ್ಸ್ ಕ್ಲಾರ್ಕ್‌ರು ಕೂಡ ಬೇವನ್ನು 1991ರಲ್ಲಿ ಪೇಟೆಂಟ್ ಮಾಡಿದ್ದಾರೆ (ಪೇಟೆಂಟ್ ಸಂಖ್ಯೆ 5,047,242). ಇದರ ಮೂಲೀಕರು ಕೂಡ W.R. ಗ್ರೇಸ್.

W.R ಗ್ರೇಸ್ ಅವರು ತುಮಕೂರಿನ ಅಂತರಸನಹಳ್ಳಿಯಲ್ಲಿ P.J. ಮಾರ್ಗೋ ಪ್ರೈ. ಲಿ. ಸಹಯೋಗದೊಂದಿಗೆ ಒಂದು ಘಟಕವನ್ನು ಪ್ರಾರಂಭಿಸುತ್ತಿದ್ದಾರೆ. ಈ ಘಟಕವು ದಿನಂಪ್ರತಿ 20ಟನ್‌ಗಳಷ್ಟು ಬೇವಿನ ಬೀಜವನ್ನು U.S.A. ಗೆ ರಫ್ತಿಗಾಗಿ ಸಂಸ್ಕರಿಸುತ್ತದೆ.

W. R. ಗ್ರೇಸ್, MARGOSAN-O ಮತ್ತು BIONEEM ಎಂಬ ಹೆಸರಿನಲ್ಲಿ ಬೇವು ಕೀಟನಾಶಕವನ್ನು ಅಂತರರಾಷ್ಟ್ರೀಯವಾಗಿ ಉತ್ಪಾದಿಸಿ ಮಾರಾಟ ಮಾಡುತ್ತಿದ್ದಾರೆ.

ತಮ್ಮ ತುಮಕೂರಿನ ಘಟಕವು, ಬೇವು ಆಧಾರಿತ ಕೀಟನಾಶಕಗಳ ಉತ್ಪಾದನೆಗೆ ವಿಶೇಷವಾಗಿ ವಿನ್ಯಾಸಗೊಳಿಸಿ ಕಟ್ಟಲ್ಪಟ್ಟ ಪ್ರಪಂಚದ ಮೊಟ್ಟಮೊದಲ ಕಮರ್ಷಿಯಲ್ ಗಾತ್ರದ ಸೌಲಭ್ಯವೆಂದು W. R. ಗ್ರೇಸ್ ಮತ್ತು ಕಂ., ಹೇಳಿಕೊಳ್ಳುತ್ತಿದೆ. ಇದು ಶುದ್ಧ ಸುಳ್ಳು. ಸಣ್ಣ ವಲಯಗಳು ಭಾರತದಲ್ಲಿ ಬೇವು ಆಧಾರಿತ ಕೀಟನಾಶಕವನ್ನು ಅನೇಕ ಬ್ರಾಂಡ್ ಹೆಸರುಗಳಲ್ಲಿ ಕಮರ್ಷಿಯಲ್ ಆಗಿ ಉತ್ಪಾದಿಸಿ ಮಾರಾಟ ಮಾಡುತ್ತಲೇ ಬಂದಿವೆ.

ಬೇವನ್ನು ಹೀಗೆ ಪೇಟೆಂಟ್ ಮಾಡುವುದು–

— ಮೂರನೇ ವಿಶ್ವ ರಾಷ್ಟ್ರದ ಬೌದ್ಧಿಕ ಕೊಡುಗೆಯ ಮೇಲಿನ ನೇರ ಆಕ್ರಮಣ.
— ಮೂರನೇ ವಿಶ್ವರಾಷ್ಟ್ರದ ಜನರ ಸಾಮಾನ್ಯ ಬೌದ್ಧಿಕ ಆಸ್ತಿಯ ಹಗಲು ದರೋಡೆ.
— ಮೊದಲನೇ ವಿಶ್ವರಾಷ್ಟ್ರದ ವ್ಯಕ್ತಿ/ಸಂಸ್ಥೆ ಅದನ್ನು ರೂಪಿಸುವಲ್ಲಿ ತನ್ನ ಕೈವಾಡ ಹೊಂದಿಲ್ಲದ ಹೊರತು ಮೂರನೇ ವಿಶ್ವರಾಷ್ಟ್ರದ ಬೌದ್ಧಿಕ ಕೊಡುಗೆ ಬೆಲೆಯಿಲ್ಲದ್ದು ಎನ್ನುವ ಹೇಳಿಕೆ ಸೊಕ್ಕಿನದು.

ಅಂತರ ಕಾರ್ಪೋರೇಷನ್‌ಗಳ ಕೌರ್ಯದ ವಿರುದ್ಧ ವ್ಯಕ್ತಿಗಳಿಗೆ, ಸಮುದಾಯಕ್ಕೆ ಮತ್ತು ಮೂರನೇ ವಿಶ್ವ ರಾಷ್ಟ್ರಗಳಿಗೆ ರಕ್ಷಣೆಯ ಹಕ್ಕು ಇಲ್ಲ ಎಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ಈ ಚೌರ್ಯಕ್ಕೆ GATT ಒಪ್ಪಂದ ನ್ಯಾಯ ಸಮ್ಮತವಾದ ಅಂಗೀಕಾರ ನೀಡುತ್ತದೆ.

ಭಾರತ ಸರ್ಕಾರವು, GATT ಒಪ್ಪಂದಕ್ಕೆ ಗುಟ್ಟಾಗಿ ಸಹಿ ಹಾಕುವ ಮೂಲಕ ಭಾರತದ ಮತ್ತು ಮೂರನೇ ವಿಶ್ವರಾಷ್ಟ್ರಗಳ ಜನರನ್ನು ವಂಚಿಸಿದೆ.

ಹೀಗೆ ಮಾಡುವ ಮೂಲಕ ಅದು ಭಾರತದ ಗಣತಂತ್ರವನ್ನು ಮತ್ತು ತನ್ನ 800 ಮಿಲಿಯ ಜನರ ಮಾನವ ಮತ್ತು ರಾಷ್ಟ್ರೀಯ ಹಕ್ಕುಗಳನ್ನು ತೂರಿಬಿಡುತ್ತಿದೆ.

'ನೀಮ್ ಕ್ಯಾಂಪೈನ್' ಒತ್ತಾಯಿಸುವುದೆಂದರೆ-

— ರಾಬರ್ಟ್ ಲಾರ್‌ಸನ್ ಮತ್ತು ಜೇಮ್ಸ್ ಕ್ಲಾರ್ಕ್‌ರಿಗೆ ಕೊಡಲ್ಪಟ್ಟಿರುವ ಯು ಎಸ್ ಪೇಟೆಂಟ್‌ಗಳನ್ನು ವಾಪಸ್ಸು ತೆಗೆದುಕೊಳ್ಳಬೇಕು.
— ಯುಸ್‌ನ ಪೇಟೆಂಟ್ ಕಾನೂನುಗಳನ್ನು ಭಾರತ ಭಾರತ ಸರ್ಕಾರ ಮತ್ತು ಇತರ ಮೂರನೇ ವಿಶ ರಾಷ್ಟ್ರಗಳು ತಿರಸ್ಕರಿಸಬೇಕು.
— GATT ಒಪ್ಪಂದವನ್ನು ತಿರಸ್ಕರಿಸಬೇಕು.
— ಜೀವ ವೈವಿಧ್ಯ ಸಮಾವೇಶವನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಿ ಮತ್ತು ಕಾರ್ಯಗತ

21ನೇ ಪುಟ ನೋಡಿ

# ಮಹಿಳೆಯರ ನಿರ್ವಹಣೆಯಲ್ಲಿ ಅಂತರ್‌ದೃಷ್ಟಿಯೂ ಇದೆ

—ಪ್ರಮೀಳಾ

ಇಂದು ಮಹಿಳೆಯರ ಪ್ರವೇಶ ಪಡೆಯದ ಕಾರ್ಯಕ್ಷೇತ್ರವೇ ಇಲ್ಲ. ಮಹಿಳೆಯರು ನಿಭಾಯಿಸದ ಅಧಿಕಾರ ಸ್ಥಾನವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಬದಲಾವಣೆಯ ಅಲೆ ಪರಿಣಾಮ ಮೆರೆಯುತ್ತಿದೆ. ಇದು ಮಹಿಳೆಯರ ಸಾಮರ್ಥ್ಯ, ತತ್ಪರತೆಗಳ ಬಗ್ಗೆ ಮನೆಮಾಡಿಕೊಂಡಿದ್ದ ಅನೇಕ ಒಪ್ಪಿತ ನಂಬಿಕೆ, ಮೌಲ್ಯಗಳನ್ನು ಸುಳ್ಳಾಗಿಸುವಲ್ಲಿ ಅಪಾರ ಪರಿಣಾಮ ಬೀರಿದೆ. ಇದರ ಜತೆ ಜತೆಗೆಯೇ ಇನ್ನೊಂದು ಕಡೆಯಲ್ಲಿ ಹೆಂಗಸರಿಗಾಗಿಯೇ ಮಾಡಿಟ್ಟಂತ ಅಥವಾ ಹೆಂಗಸರೇ ಲಾಯಕ್ಕು ಎಂಬಂತ ನಂಬಿಕೆಯಿದ್ದ ಅನೇಕ ವೃತ್ತಿಗಳೂ ಇಂದು ಮರುವಿವರಣೆಯನ್ನು ಪಡೆಯುತ್ತಾ ರೂಢಿಗತ ಮಿಥ್‌ಗಳನ್ನು ಮಾರಿಯುತ್ತಿವೆ. ಇಂತಹ ಒಂದು ವೃತ್ತಿಯೆಂದರೆ ನರ್ಸಿಂಗ್. ಹೆಂಗಸರಲ್ಲಿ ಮನೆಮಾಡಿಕೊಂಡಿರುವ ಸೇವಾ ಮನೋಭಾವ, ಓಲೈಸುವಿಕೆ, ಪೋಷಣೆಯ ಸ್ವಭಾವಗಳೇ ಕಾರಣವಾಗಿ ನರ್ಸಿಂಗ್‌ನಂತ ವೃತ್ತಿ ಅವರಿಗೇ ಮೀಸಲಾಗಿಡುವಂತಹ ಸ್ಥಿತಿಯಲ್ಲಿ ಕಾಲಾಂತರತಲ್ಲಿ ಉಂಟಾದ ಬದಲಾವಣೆ ಕೂದಲೆಳೆಯುವಷ್ಟು ಮಾತ್ರ, ತೀರಾ ಗೌಣ. 1854ರಷ್ಟು ಹಿಂದೆಯೇ ಕೆಲವು ಸಿಸ್ಟರುಗಳು ಸೇವಾ ಮನೋಭಾವದಿಂದ ಬೆಂಗಳೂರಿನಲ್ಲಿ ಪ್ರಾರಂಭಿಸಿದ ಸೇಂಟ್ ಮಾರ್ಥಾಸ್ ಆಸ್ಪತ್ರೆಯು ಅದೇ ಕಾರಣಕ್ಕಾಗಿಯೇ ನಂತರದಲ್ಲಿ 'ಹಾಸ್ಪಿಟಲ್ ಆಫ್ ನರ್‌ನಸ್' ಎಂದು ಹೆಸರಾಯಿತು. ನರ್ಸುಗಳೆಂದ ಮೇಲೆ ಮಹಿಳೆಯರು ತಾನೇ! ಹಾಗಾಗಿ ಇಡೀ ಆಸ್ಪತ್ರೆಯ ಜವಾಬ್ದಾರಿಯನ್ನು ಹೆಂಗಸರು ಹೊತ್ತುಕೊಳ್ಳಬೇಕಾಯಿತು. ಅದಷ್ಟೇ ಆಗಿದ್ದರೆ ಏನೂ ವಿಶೇಷವಿರುತ್ತಿರಲಿಲ್ಲವೇನೋ. ಆದರೆ ಇಂದು ಈ ಆಸ್ಪತ್ರೆ ತನ್ನ ಹಲವಾರು ನಿರ್ವಹಣಾ ಅಂಶಗಳಲ್ಲಿ ಬೇರೆ ಯಾವುದೇ ಆಸ್ಪತ್ರೆಗಳಿಗಿಂತ ಪ್ರತಿಷ್ಠಿತವಾಗಿದ್ದು ಮನ್ನಣೆ ಪಡೆದಿದೆ.

ಅನೇಕ ವರ್ಷಗಳಿಂದ ಈ ಆಸ್ಪತ್ರೆಯ ಮುಖ್ಯಸ್ಥೆಯಾಗಿ ಒಟ್ಟಾರೆಯ ನಿರ್ವಹಣೆಯನ್ನು ನಿಭಾಯಿಸುತ್ತಾ ಬಂದಿರುವ ಸಿಸ್ಟರ್ ಪ್ರಮೀಳಾರನ್ನು ಹಲವರು ಹತ್ತಿರದಿಂದ ಕಂಡಿದ್ದೇವೆ. ದಿಟ್ಟ ವಿಚಾರ-ನಿಲುವುಗಳ ಈಕೆ ತಾನಿರುವ ಧಾರ್ಮಿಕ ವ್ಯವಸ್ಥೆಯ ಒಳಗಡೆಯೇ ತನ್ನದೇ ಆದ ಸದ್ದಿಲ್ಲದ ರೀತಿಯಲ್ಲಿ ವೈಯಕ್ತಿಕತೆಯ ಛಾಪು ಮೂಡಿಸಿದ್ದಾರೆ. ಮಹಿಳೆಯರ ಪ್ರಶ್ನೆಯ ಸಂಬಂಧದಲ್ಲಂತೂ ಇವರದ್ದು ರಾಜಿ ಸಾಧ್ಯವಿಲ್ಲದ ನಿಲುವು (ಹುಟ್ಟು ಸ್ತ್ರೀವಾದೀ ಎಂದರೆ ತಪ್ಪಿಲ್ಲವೇನೋ!). ಎಲ್ಲೋ ಎಲೆಮರೆಯ ಕಾಯಿಯಾಗಿ ಸಾಂಪ್ರದಾಯತೆಯಲ್ಲಿ ಮುಚ್ಚಿಹೋಗಿಬಿಡಬಹುದಾಗಿದ್ದ 'ಹಾಸ್ಪಿಟಲ್ ಆಫ್ ನರ್‌ಸಸ್' ಎಂಬ ಕಲ್ಪನೆಗೆ ಈಕೆಯ ನಿರ್ವಹಣೆಯಲ್ಲಿ ಒಂದು ನಿಜವಾದ ಸ್ತ್ರೀಪರ ನಿಲುವು ಸಿಕ್ಕಿದೆ. ಇದರ ಫಲವಾಗಿ ಆಸ್ಪತ್ರೆಯ ಪ್ರತಿ ವಿಭಾಗಗಳನ್ನು ನಿರ್ವಹಿಸುವ ಮಹಿಳೆಯರಿಗೆ ಇಂದು ಇದು ಕೇವಲ ರಿಚುಯಲಿಸ್ಟಿಕ್ ಆಗಿಬಿಡದೆ ನಿಜ ಸಶಕ್ತತೆಯ ಅನುಭವ ಕೊಟ್ಟಿದೆ. ಸದ್ದಿಲ್ಲದೆಯೇ ಈ ತಿಂಗಳು ತಮ್ಮ ಸ್ಥಾನದಿಂದ ಹೊರಹೋಗುತ್ತಿರುವ ಪ್ರಮೀಳಾರನ್ನು ಅವರ ಅನುಭವ-ವಿಚಾರಗಳನ್ನು ಹಂಚಿಕೊಳ್ಳುವಂತೆ ಕೇಳಿಕೊಂಡಾಗ 'ನಾನೊಬ್ಬ ಸಾಮಾನ್ಯ ಮಹಿಳೆ' ಎಂದು ಸಂಕೋಚಪಟ್ಟುಕೊಂಡರು. ಹಂಚಿಕೊಳ್ಳಲು ಪ್ರಾರಂಭಿಸಿದಾಗ ಮಾತ್ರ ಮಹಾಪೂರವೇ ಹರಿಯ ಪ್ರಾರಂಭಿಸಿತು. ವಿ. ಗಾಯಿತ್ರಿ ಆಕೆಯೊಂದಿಗೆ ನಡೆಸಿದ ಸಂವಾದದ ಸಂಕ್ಷಿಪ್ತ ನೋಟವೊಂದು ಇಲ್ಲಿದೆ.

**ಪ್ರ:** ನೀವು ಈ ವೃತ್ತಿಯನ್ನು ಆರಿಸಿಕೊಂಡದ್ದು ಹೇಗೆ?

**ಉ:** S.S.L.C. ಪರೀಕ್ಷೆಯ ನಂತರ ನನಗೆ ಭಿನ್ನವಾದದ್ದೇನನ್ನಾದರೂ ಮಾಡಬೇಕೆನ್ನಿಸಿತ್ತು, ನನ್ನ ಇತರ ಗೆಳತಿಯರಂತೆ ಮದುವೆಯಾಗಿ ಜೀವನಪರ್ಯಂತ ಗಂಡನ ಅಡಿಯಾಳಾಗಿ ಹೋಗಿಬಿಡುವ ಬದಲು. ಆದರೆ ಯಾವ ಕಲ್ಪನೆಯೂ ಇರಲಿಲ್ಲ. ಒಂದು ದಿನ, ನಾಗಪುರದಲ್ಲಿ ಹಿಂದುಳಿದ ಜನರ ಜತೆ ಕೆಲಸ ಮಾಡುತ್ತಿದ್ದ ಕೆಲವು ಸಿಸ್ಟರ್‌ಗಳನ್ನು ನೋಡಿದೆ. ಅವರ ಸಂಪರ್ಕ-ಒಡನಾಟಗಳು ಹೆಚ್ಚಾದಂತೆ ನಾನು ಸಿಸ್ಟರ್ ಆಗಬೇಕೆಂಬ ಬಲವಾದ ಆಸೆ ಬೇರೂರಿತು. ಇದರಿಂದ ಇತರರ ಜತೆ ಕೆಲಸ ಮಾಡುವ ಸದುದ್ದೇಶವೂ ಕೈಗೂಡುವುದಲ್ಲದೆ ಹೆಂಗುಸಾಗಿ ನನ್ನ ಐಡೆಂಟಿಟಿಯೂ ಪಕ್ಕುತ್ತದೆ ಎನಿಸಿತು. ಹೀಗೆ ನಾನು ಸಿಸ್ಟರಾದೆ, ಅದೂ ಸಂಪೂರ್ಣ ಮಹಿಳೆಯರದ್ದೇ ಆದ ಗುಡ್‌ಷಪರ್ಡ್ ಸಂಸ್ಥೆಯಲ್ಲಿ.

ಮೊದಲಿಗೆ ಸಮಾಜ ಕಾರ್ಯಕರ್ತೆಯಾಗಿದ್ದು ನಂತರ L.L.B. ಡಿಗ್ರಿಯನ್ನು ಪಡೆದು ನಾನು ಮಾರ್ಥಾಸ್ ಆಸ್ಪತ್ರೆಯಲ್ಲಿ ನರ್ಸಿಂಗ್ ಹಾಸ್ಟೆಲಿನ ವಾರ್ಡನ್ ಆದೆ. 1987ರಲ್ಲಿ ನಾನು ಮಾರ್ಥಾಸ್ ಆಸ್ಪತ್ರೆಯ ಸಿಸ್ಟರ್ ಸುಪಿರೀಯರ್ ಆಗಿ ಆಯ್ಕೆ ಹೊಂದಿ ಆಸ್ಪತ್ರೆ ಸೊಸೈಟಿಯ ಪ್ರೆಸಿಡೆಂಟ್ ಆಗಿ ಚುನಾಯಿತಗೊಂಡೆ. ಈ ರೀತಿಯಲ್ಲಿ ನಾನು ಈ ಸಂಸ್ಥೆಯ ಮುಖ್ಯಸ್ಥಳಾದೆ.

**ಪ್ರ:** ಈ ಆಸ್ಪತ್ರೆ ಮಹಿಳೆಯರಿಂದಲೇ ನಿರ್ವಹಿಸಲ್ಪಡುತ್ತಿದೆಯೆಂದು ಕಂಡುಬರುತ್ತದಲ್ಲ ಸ್ವಲ್ಪ ವಿವರಿಸಿ.



ಉ : ಹೌದು, ಈ ಆಸ್ಪತ್ರೆ ಮಹಿಳೆಯರದ್ದೇ ಆಗಿದ್ದು, ಮಹಿಳೆಯರಿಂದಲೇ ನಡೆಸಲ್ಪಡುತ್ತದೆ. ಪಾಲಿಸಿಗಳನ್ನು ಮಾಡುವುದು, ಮುಖ್ಯ ತೀರ್ಮಾನಗಳನ್ನು ಕೈಗೊಳ್ಳುವುದು ಎಲ್ಲವೂ ಮಹಿಳೆಯರೇ. ಇದರ ಜತೆಗೆ ಅವರು ಎಲ್ಲಾ ವಾರ್ಡುಗಳ ಮತ್ತು ವಿಭಾಗಗಳ ಮುಖ್ಯಸ್ಥರಾಗಿರುತ್ತಾರೆ. ಇಡೀ ಆಸ್ಪತ್ರೆಯ ಆಡಳಿತ ಅವರಿಂದಲೇ ನಡೆಸಲ್ಪಡುತ್ತಿರುವುದು. ಪ್ರಾರಂಭದಲ್ಲಿ ಗುಡ್‌ಷಫರ್ಡ್‌ನ ಸಿಸ್ಟರುಗಳು ಮಾತ್ರ ಇಂತಹ ಸ್ಥಾನಗಳಲ್ಲಿರುತ್ತಿದ್ದು ಕ್ರಮೇಣದಲ್ಲಿ ಹೊರಗಡೆಯವರೂ ಇದರಲ್ಲಿ ಪ್ರವೇಶ ಪಡೆಯತೊಡಗಿದರು. ಈಗ ಹೊರರೋಗಿಗಳ ವಿಭಾಗ, ತುರ್ತುಚಿಕಿತ್ಸಾ ವಿಭಾಗ, ಇ-ಮುಹಡಿ, ಎಲ್ಲ ಹೆರಿಗೆ ವಾರ್ಡುಗಳನ್ನು ಒಳಗೊಂಡಂತೆ ಹೊರಗಿನ ಮಹಿಳೆಯರು ಈಗ ಆಸ್ಪತ್ರೆಯ ಅನೇಕ ಕಡೆಗಳಲ್ಲಿ ಮುಖ್ಯಸ್ಥೆಯರ ಸ್ಥಾನದಲ್ಲಿದ್ದಾರೆ.

ಒಬ್ಬ ಡಾಕ್ಟರರು ಆಸ್ಪತ್ರೆಯನ್ನು ಸೇರಿಕೊಂಡಾಗ, ಮಹಿಳೆಯರೇ ಇಲ್ಲಿ ಪಾಲಿಸಿಗಳನ್ನು ಮಾಡುತ್ತಿದ್ದು ಇಡೀ ಆಡಳಿತಾತ್ಮಕ ನಿರ್ಧಾರಗಳನ್ನು ಮಹಿಳೆಯರೇ ಕೈಗೊಳ್ಳುತ್ತಿರುವುದನ್ನು ಕಂಡುಕೊಳ್ಳುತ್ತಾರೆ. ಹಾಗೆಯೇ ಬೇರೆಲ್ಲೂ ಕಾಣದ ರೀತಿಯಲ್ಲಿ ಈ ಆಸ್ಪತ್ರೆ ನರ್ಸುಗಳಿಂದ ನಡೆಸಲ್ಪಡುತ್ತಿದೆಯೆನ್ನುವ ಸತ್ಯವನ್ನು ಮನಗಾಣುತ್ತಾರೆ. ಬೇರೆ ಕಡೆಗಳಲ್ಲಿ ಸಾಮಾನ್ಯವಾಗಿ ಡಾಕ್ಟರುಗಳದ್ದೇ ಅಂತಿಮ ಅಧಿಕಾರವಾಗಿರುತ್ತದೆ. ಆದರೆ ಇಲ್ಲಿ, ಈ ಆಸ್ಪತ್ರೆಯಲ್ಲಿ ಅದು ನರ್ಸುಗಳ ಕೈಯಲ್ಲಿದೆ. ಸಹಜವಾಗಿಯೇ ತಾವು ಹೆಚ್ಚು ಬುದ್ಧಿವಂತರು ಮತ್ತು ಸಮರ್ಥರು ಎಂದು ಭಾವಿಸಿಕೊಳ್ಳುವ ಡಾಕ್ಟರುಗಳಿಗೆ ಇದು ನುಂಗಲಾರದ ತುತ್ತು.

**ಪ್ರ** : ಮಹಿಳೆಯರು ಅಧಿಕಾರ ಸ್ಥಾನಗಳಿಗೆ ಸಲ್ಲುವವರಲ್ಲ ಎಂಬುದು ಸಾಮಾನ್ಯದ ನಂಬಿಕೆ. ಈ ಆಸ್ಪತ್ರೆಯ ಪ್ರತಿಯೊಂದು ಅಧಿಕಾರ ಸ್ಥಾನದಲ್ಲಿ ಮಹಿಳೆಯರೇ ಇರುವುದೂ ಅಲ್ಲದೆ ನೀವು ಇಡೀ ಆಸ್ಪತ್ರೆಯ ಮುಖ್ಯಸ್ಥೆಯಾಗಿ 6 ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದಲೂ ನಿರ್ವಹಿಸುತ್ತಿರುವಿರಿ. ಅಷ್ಟೇ ಅಲ್ಲದೆ ನೀವು ಈ ಸ್ಥಾನಕ್ಕೆ 'ಮಾಡಿಸಿಟ್ಟವರು' ಎಂಬ ಮಾತಿದೆ. ನಿಮ್ಮ ಅನುಭವ ಅನಿಸಿಕೆಗಳೇನು ?

**ಉ** : ಮಹಿಳೆಯರು ಅಧಿಕಾರ ಸ್ಥಾನಗಳಿಗೆ ಸಲ್ಲುವವರಲ್ಲ ಎಂಬ ವಿಚಾರವನ್ನು ನಾನು ವೈಯಕ್ತಿಕವಾಗಿ ಒಪ್ಪುವುದೇ ಇಲ್ಲ. ಅದೊಂದು ಮಿಥ್. ಪುರುಷರಿಂದ ಇಲ್ಲವೇ ಪುರುಷ ಪ್ರಧಾನ ಸಮಾಜದಿಂದ ಸೃಷ್ಟಿಸಲ್ಪಟ್ಟು ಎಲ್ಲರಿಂದಲೂ ನಂಬಲ್ಪಟ್ಟಿರುವ ಮಿಥ್ ಅದು. ನಮ್ಮಲ್ಲಿ ಸಮರ್ಥರಾದ ಮಹಿಳಾ ನಾಯಕಿಯರಿಲ್ಲವೇನು ?

ನಿರ್ಧಾರಗಳನ್ನು ತೆಗೆದುಕೊಳ್ಳುವ ಶಕ್ತಿಯು ಸಾಮರ್ಥ್ಯದಿಂದ, ಕುಶಲತೆಯಿಂದ ಮತ್ತು ಅನುಭವದಿಂದ ಬರುವಂತದ್ದು. ಇದು ಕೇವಲ ಗಂಡಸರೊಬ್ಬರ ಸ್ವತ್ತಲ್ಲ. ನನ್ನ ಪ್ರಕಾರ ಮಹಿಳೆಯರು ಪುರುಷರಿಗಿಂತ ಹೆಚ್ಚು ಸಮರ್ಥವಾಗಿ ಅಧಿಕಾರ ಸ್ಥಾನಗಳನ್ನು ನಿರ್ವಹಿಸಬಲ್ಲರು. ಏಕೆಂದರೆ ಮಹಿಳೆಯರು ಹೆಚ್ಚು ಅಂತರ್‌ದೃಷ್ಟಿಯನ್ನು ಹೊಂದಿದವರೂ, ಮಾನವೀಯ ನೆಲೆಯಿಂದ ನೋಡುವವರೂ ಆಗಿರುತ್ತಾರೆ.

ಇದುವರೆಗೂ ನನಗೆ ನಾನು ಅಧಿಕಾರ ಸ್ಥಾನದಲ್ಲಿ ಪುರುಷರಿಗಿಂತ ಕಡಿಮೆ ಪರಿಣಾಮಕಾರಿಯಾಗಿದ್ದೇನೆಂದು ಅನ್ನಿಸುವುದೇ ಇಲ್ಲ. ಪುರುಷರೊಂದಿಗೆ ಕೆಲಸ ಮಾಡುವಾಗ ನನ್ನ ಅನುಭವಕ್ಕೆ ಬಂದಿದ್ದೆಂದರೆ, ಅವರು ಯಾವಾಗಲೂ ತೀರ್ಮಾನ ಕೈಗೊಳ್ಳಲು ಮುಂದೆ ಬರುತ್ತಾರೆ ಮತ್ತು ಮಹಿಳೆಯೊಬ್ಬಳು ಪರಿಣಾಮಕಾರಿಯಾಗಿ ನಿರ್ವಹಿಸಿದಾಗ ಆಕೆ ಪುರುಷರಂತೆ ನಡೆದುಕೊಂಡಳು ಎಂದು ಅಭಿಪ್ರಾಯಪಡುತ್ತಾರೆ. ಇಲ್ಲಿ ಒಂದು ಸಣ್ಣ ಘಟನೆ ನನ್ನ ಮನಸ್ಸಿಗೆ ಬರುತ್ತದೆ. ಕೆಲ ತಿಂಗಳುಗಳ ಹಿಂದೆ, ಆಸ್ಪತ್ರೆಯಲ್ಲಿ ಒಂದು ಕಾನೂನು ಸಂಬಂಧೀ

ಸಮಸ್ಯೆ ತಲೆದೋರಿತ್ತು. ಇಲ್ಲಿ ನಾನು ಪೋಲೀಸರನ್ನೂ ಒಳಗೊಂಡಂತೆ ಅನೇಕರೊಟ್ಟಿಗೆ ವ್ಯವಹರಿಸಿ ಅದನ್ನು ನಿರ್ವಹಿಸಬೇಕಾಯಿತು. ಸಮಸ್ಯೆಯು ಪರಿಹಾರ ಕಂಡಾಗ ನನ್ನ ಸಹದ್ಯೋಗಿ ಪುರುಷರೊಬ್ಬರು ಹೀಗೆಂದರು: "ಮುಖ್ಯಸ್ಥೆಯ ಬಗ್ಗೆ ನನಗೆ ಈಗ ಹತ್ತುಪಟ್ಟು ಗೌರವ ಹೆಚ್ಚಾಗಿದೆ. ಆಕೆ ಇಡೀ ಸನ್ನಿವೇಶವನ್ನು ಗಂಡಸಿನಂತೆ ನಿಭಾಯಿಸಿದರು." ಅದು ಹೊಗಳಿಕೆಯಾಗಿತ್ತು. ಆದರೆ ನನಗೆ ಇದರಿಂದ ತೀರಾ ಅಪಮಾನವೆನಿಸಿತು. ನಾವು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಿದಾಗ ಅವರು ಅದು 'ಪುರುಷರ ರೀತಿ' ಎಂದು ಹೇಳುವ ಮೂಲಕ ಸಮಾಧಾನ ತಂದುಕೊಳ್ಳುತ್ತಾರೆ. ಏಕೆ ? ಅದು ಪುರುಷರಿಗಿಂತ ಹೆಚ್ಚು ಉತ್ತಮವಾಗಿರಬಹುದಲ್ಲವೇ ? ಹಾಗೆಂದು ನಾನು ಖಂಡಿತಾ ನಂಬುತ್ತೇನೆ. ಹಿಂದೆ ಹೇಳಿದಂತೆ ಮಹಿಳೆಯರ ಅಂತರ್ ದೃಷ್ಟಿ, ಮಾನವೀಯ ನೆಲೆಯಿಂದ ನೋಡುವ ಗುಣಗಳು ಇದಕ್ಕೆ ಒತ್ತಾಸೆಯನ್ನು ಕೊಡಬಲ್ಲುವು.

**ಪ್ರ** : ಮಹಿಳೆಯರ ಕೆಲ ಸಹಜ ಗುಣಗಳು ಅವರ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ ಎಂದಿರಿ ನಿಮ್ಮ ಅನುಭವದಿಂದ ಇದನ್ನು ಹೆಚ್ಚು ಮೂರ್ತನಾಗಿ ವಿವರಿಸಬಲ್ಲಿರಾ ?

**ಉ** : ಮಹಿಳೆಯರು ದೈಹಿಕವಾಗಿ ಪುರುಷರಿಗಿಂತ ಭಿನ್ನರು. ನಮ್ಮ ದೇಹ ಗರ್ಭಧರಿಸಲಿಕ್ಕೆ, ಹೆರಲಿಕ್ಕೆ, ಪೋಷಿಸಲಿಕ್ಕೆ, ಜೀವ ರಕ್ಷಿಸಲಿಕ್ಕೆ ಬೇಕಾದ ರೀತಿಯಲ್ಲಿ ಹೆಚ್ಚಾಗಿ ರೂಪಿಸಲ್ಪಟ್ಟಿದೆ. ಕೊಟ್ಟುಕೊಳ್ಳುವಿಕೆ ನಮಗೆ ಸಹಜವಾದದ್ದು. ಇತರರ ಬೇಕು ಬೇಡಗಳ ಕಲ್ಪನೆ ನಮಗೆ ಸಹಜವಾಗಿಯೇ ದಕ್ಕಿರುವಂತದ್ದು. ಒಟ್ಟಾರೆಯಾಗಿ ನಾವು ಪುರುಷರಿಗಿಂತ ಭಿನ್ನರು. ನಮ್ಮ ನಿರ್ವಹಣೆ ಭಿನ್ನವಾದದ್ದು, ಏಕೆಂದರೆ ನಮ್ಮ ರೀತಿ-ನೀತಿಗಳು ಮಾನವೀಯವಾದವು. ನನ್ನ ಅನುಭವದಲ್ಲಿ, ಪುರುಷರು ಕಾರ್ಯಸಾಧನೆಗಾಗಿಯೇ ತೀರ್ಮಾನಗಳನ್ನು ಕೈಗೊಳ್ಳುತ್ತಾರೆ ಎನಿಸುತ್ತದೆ. ಆದರೆ ನಾವು ಕಾರ್ಯ ಸಾಧನೆಯ ಜತೆ-ಜತೆಗೇ ಇತರರ ಭಾಗವಹಿಕೆಯನ್ನೂ ತರುತ್ತಾ ಸಣ್ಣ-ಸಣ್ಣ ವಿವರಗಳಿಗೂ ಗಮನ ಹರಿಸುತ್ತೇವೆ, ವಿವಿಧ ಮುಖಗಳನ್ನು ನೋಡಲು ಪ್ರಯತ್ನಿಸುತ್ತೇವೆ.

ಆಸ್ಪತ್ರೆಯಲ್ಲಿ ಮಹಿಳೆಯರ ನಿರ್ವಹಣೆ ಹೆಚ್ಚು ಸಮರ್ಥವಾಗಿರಲು ಕಾರಣ ನಾವಿಲ್ಲಿ ಮುಖಾಮುಖಿಯಾಗುವುದು ಮನುಷ್ಯರ ಜತೆ. ಯಂತ್ರಗಳಲ್ಲ. ಅದೂ ನೋವುಣ್ಣುತ್ತಿರುವ ಮನುಷ್ಯರ ಜತೆ, ಜಾಗರೂಕತೆ, ಕಳಕಳಿ, ಅರ್ಥಮಾಡಿಕೊಳ್ಳುವ ಜಾಯಮಾನ ಇಲ್ಲಿ ತುಂಬಾ ಮುಖ್ಯವಾಗಿರುವುದರಿಂದ ಮತ್ತು ಮಹಿಳೆಯರು ಇತರ ನಿರ್ವಹಣಾ ಅಂಶಗಳ ಜತೆಗೆ ಇಂತಹ ವಿಚಾರಗಳಿಗೆ ಸಹಜವಾಗಿಯೇ ಪಕ್ಕಾಗಿರುವುದರಿಂದ ಅವರ ನಿರ್ವಹಣೆಯ ಗುಣಮಟ್ಟ ಅಷ್ಟೇ ಸಹಜವಾಗಿ ಉತ್ತಮವಾಗಿರುತ್ತದೆ.

**ಪ್ರ** : ಇದೇ ಸಮಯದಲ್ಲಿ, ಅಧಿಕಾರ ಸ್ಥಾನದಲ್ಲಿರುವ ಮಹಿಳೆಯರು, ಅವರೂ ಕೂಡ ಅಧಿಕಾರ ವ್ಯವಸ್ಥೆಯ ಭಾಗವೇ ಆಗಿರುವುದರಿಂದ ಅವರ ನಿರ್ವಹಣೆಯಲ್ಲಿ ಅಂತಹ ವ್ಯತ್ಯಾಸವೇನೂ ಕಂಡುಬರಲಾರದು ಎಂಬುದೂ ಟೀಕೆ. ನೀವು ಹೇಗೆ ಪ್ರತಿಕ್ರಿಯಿಸುವಿರಿ! ನಿಮ್ಮ ಅನುಭವ ಏನು ?

**ಉ** : ಮಹಿಳೆಯರು ಅಧಿಕಾರ ವ್ಯವಸ್ಥೆಯ ಭಾಗ ಎನ್ನುವುದು ಸತ್ಯ. ಇದೆಂತಹ ಭಾಗ ? ಪುರುಷರು ನಮಗೆ ವಹಿಸಿಕೊಟ್ಟ ಭಾಗವೇ ? ಪುರುಷ ಪ್ರಧಾನ ವ್ಯವಸ್ಥೆ ಕೊಟ್ಟ ಭಾಗವೇ ?

ಮಹಿಳಾ ನಿರ್ವಾಹಕರು ಖಂಡಿತವಾಗಿಯೂ ಭಿನ್ನರು ಮತ್ತು ಈ ಭಿನ್ನತೆಯನ್ನು ಸೃಷ್ಟಿಸುವುದು ನಮ್ಮಂತಾ ಪ್ರತಿಯೊಬ್ಬರಿಗೂ ಬಿಟ್ಟದ್ದು. ಅಧಿಕಾರ ವ್ಯವಸ್ಥೆಯಲ್ಲಿ ಯಾವ ರೀತಿಯಲ್ಲಿ ಭಾಗಿಗಳಾಗಿರುತ್ತೇವೆ ಎಂಬುದರ ವಿವೇಚನೆ ನಮಗೆ ಸೇರಿದ್ದು. ಮಹಿಳೆಯರು ಉತ್ತಮ ಸರ್ಜನ್‌ಗಳಾಗಲಾರರು ಎಂಬ ಮಿಥ್ ಇದೆ. ನಮ್ಮ ಆಸ್ಪತ್ರೆಯಲ್ಲಿ ಡಾಕ್ಟರುಗಳಿಗಾಗಿ ನಡೆಸುವ ಸಂದರ್ಶನದಲ್ಲಿ ಮಹಿಳಾ ಸರ್ಜನ್‌ಗಳಿದ್ದಾಗ, ಸಮರ್ಥ ಲೇಡಿ ಡಾಕ್ಟರುಗಳಿದ್ದಾಗ ನಾವು ಅವರನ್ನೇ ಖಂಡಿತಾ ಆರಿಸುತ್ತೇವೆ. ಡಾಕ್ಟರುಗಳಾದಿಯಾಗಿ ಅನೇಕ ಹುದ್ದೆಗಳಿಗೆ, ನಾವು ಎಚ್ಚರಿಕೆಯಿಂದಿರದೇ ಹೋದಾಗ ಪುರುಷರನ್ನೇ ಆರಿಸಿಬಿಡುವ ಅಪಾಯ ಖಂಡಿತಾ ಇದೆ. ಏಕೆಂದರೆ ಅವರು ಹೆರಿಗೆಯ ರಜೆ ತೆಗೆದುಕೊಳ್ಳುವುದಿಲ್ಲ. ಮಗುವಿಗೆ ಹುಷಾರಿಲ್ಲದಾಗ ಮನೆಯಲ್ಲೇ ಉಳಿಯಬೇಕಾಗಿಲ್ಲ ಇತ್ಯಾದಿ. ಇಂತಹ ಲಿಂಗಭೇದದ ವಿರುದ್ಧ ನಾನು ನಿರಂತರ ಹೋರಾಡುತ್ತಲೇ ಬಂದಿದ್ದೇನೆ.

ಪ್ರ : ಪ್ರಮುಖ ಆಸ್ಪತ್ರೆಯೊಂದರ ಮುಖ್ಯಸ್ಥೆಯಾಗಿ ನೀವು ಒಳಪಡುವ ನಿರ್ಬಂಧಗಳು ಎಂತವು ? ಇದನ್ನು ನೀವು ಹೇಗೆ ನಿಭಾಯಿಸುವಿರಿ ?

ಉ : ನಾನು ಯಾವಾಗಲೂ ಮುಖಾಮುಖಿ ಯಾಗುತ್ತಲೇ ಬಂದಿರುವ ಒಂದು ನಿರ್ಬಂಧವೆಂದರೆ, ಸಿಸ್ಟರಾಗಿ ಮತ್ತು ಮಹಿಳೆಯಾಗಿ ನಿರ್ದಿಷ್ಟ ರೀತಿಯಲ್ಲಿ ನಡೆದುಕೊಳ್ಳಬೇಕೆನ್ನುವ ಸುತ್ತಲಿನ ನಿರೀಕ್ಷೆ ಮತ್ತು ಒತ್ತಡ. ಡ್ರೈವಿಂಗ್ ಅನ್ನು ನಾನು ತುಂಬಾ ಹಿಂದೆಯೇ ಕಲಿತಿದ್ದೇನೆ. ತುರ್ತು ಸ್ಥಿತಿ ಇದ್ದಾಗ ನಾನು ಆಂಬುಲೆನ್ಸ್ ಅನ್ನು ಓಡಿಸುತ್ತೇನೆ. ಇಲ್ಲಿ ಸಾಮಾನ್ಯವಾಗಿ ಬರುವ ಮಾತೆಂದರೆ ನಾನು ಗಂಡಸಿನ ಹಾಗೆ ಎಂದು. ಅವಶ್ಯಕತೆ ಯಿದ್ದಾಗ ನಾನು ಎಲ್ಲಿಗಾದರೂ ಒಬ್ಬಂಟಿಯಾಗಿ ಹೋಗಬಲ್ಲೆ. ಆದರೆ ಹೀಗೆ ಮಾಡಬಾರದೆನ್ನುವ ಒತ್ತಡ ಸದಾಕಾಲ ನನ್ನ ಮೇಲಿದೆ. ನಾನು ಗಂಡಸಿನಂತೆ 'ಭಯರಹಿತ'ಳಾಗಿರದೆ ಹೆಂಗಸಿನ ಬಾಗೆ 'ಭಯಪೂರಿತ' ಳಾಗಿರಬೇಕೆನ್ನುವ ಒತ್ತಡ ಇದು. ಇಂತಹ ನಿರೀಕ್ಷೆಯನ್ನು ಮುರಿದಾಗ ನನಗೆ ವಿಮೋಚನೆಯ ಅನುಭವವಾಗಿದೆ ಮತ್ತು ಹೊಸ ಬಗೆಯ ಬಿಡುಗಡೆ, ಬದುಕುಗಳ ಅನುಭವ ವಾಗಿದೆ.

ಅನೇಕ ಸಲ ಮೀಟಿಂಗಳ ನಂತರ ಸರಿರಾತ್ರಿಯಲ್ಲಿ ನಾನೊಬ್ಬಳೇ ಹೋಗುತ್ತೇನೆ ಎಂಬುದು, ಕೇವಲ ಗಂಡಸರೇಕೆ ಹೆಂಗಸರ ಹುಬ್ಬುಗಳನ್ನು ಏರಿಸಿದೆ. ಜವಾಬ್ದಾರಿಯುತ ಸ್ಥಾನದಲ್ಲಿರುವ ಮಹಿಳೆ 'ಹೀಗೆಯೇ' ನಡೆದುಕೊಳ್ಳಬೇಕೆನ್ನುವ ನಿರೀಕ್ಷೆಗಳನ್ನು ಸುಳ್ಳಾಗಿಸಿದಾಗ ಬಲಾತ್ಕಾರಪೂರ್ವಕವಾಗಿ ಅವರು ಅದನ್ನು ಒಪ್ಪಿಕೊಳ್ಳ ಬೇಕಾಗಿದೆ. ಇಂತಹ ನಿರೀಕ್ಷೆಗಳನ್ನು ಮುರಿಯಲು ಕೆಲ ಸಮಯಗಳಲ್ಲಂತೂ ನಾನು ತೀವ್ರ ಹೋರಾಟವನ್ನೇ ನಡೆಸಬೇಕಾಗಿದೆ, ಅತ್ಯಂತ ದೃಢವಾಗಿರಬೇಕಾಗಿದೆ.

ಪ್ರ : ಈ ಆಸ್ಪತ್ರೆಯಲ್ಲಿರುವ ಮಹಿಳೆಯರ ನಿರ್ವಹಣೆ "ಹಾಸ್ಪಿಟಲ್ ಆಫ್ ನರ್ಸಸ್" ಎಂಬ ಸಿದ್ಧಾಂತಕ್ಕೆ ಸಂಬಂಧಿಸಿದ್ದು. ಮೂಲಭೂತವಾಗಿ ಈ ಸಿದ್ಧಾಂತ ಖಂಡನೀಯವಾದರೂ, ಕೊನೇ ಪಕ್ಷ ಈ ಆಸ್ಪತ್ರೆಯಲ್ಲಿ ಮಹಿಳೆಯರ ಸಂಪೂರ್ಣ ನಿರ್ವಹಣೆಗೆ ಅದು ಹಾದಿ ಮಾಡಿಕೊಟ್ಟಿದೆ. ಇದು ತುಂಬಾ ಇತ್ಯಾತ್ಮಕ ಅಂಶವೆಂದು ಅನ್ನಿಸುತ್ತದೆ. ಈ ದ್ವಿತ್ವತೆಯ ಬಗ್ಗೆ ನಿಮ್ಮ ಪ್ರತಿಕ್ರಿಯೆ.

ಉ : ರೋಗಿಗಳು ಮತ್ತು ಅವರ ಸಂಗಡಿಗರು ಹೆಚ್ಚು ಕೇರನ್ನು ಬಯಸುವ ಸ್ಥಳ ಆಸ್ಪತ್ರೆ. ಬೆಂಗಳೂರು ನಗರದಲ್ಲಿ ಮಾರ್ಥಾಸ್ ಆಸ್ಪತ್ರೆ ತನ್ನ ಅದ್ಭುತ ತಜ್ಞತೆ ಗಾಗಲೀ ಅಥವಾ ಅಸಾಧಾರಣ ಡಾಕ್ಟರುಗಳಿಗಾಗಲೀ ಪ್ರಸಿದ್ಧಿಯಲ್ಲ. ಆದರೆ, ನರ್ಸಿಂಗ್‌ನಲ್ಲಿನ ಜಾಗರೂಕತೆ, ಆಸ್ಥೆಗಳಿಗಾಗಿ ಇದು ಪ್ರಸಿದ್ಧಿ. ಉತ್ತಮ ನರ್ಸಿಂಗೇ ಇಲ್ಲಿನ ಆಸ್ತಿ. ಆಸ್ಪತ್ರೆಯ ವಾರ್ಡುಗಳೆಲ್ಲಾ ನರ್ಸು ಗಳಿಂದ ನಿರ್ವಹಿಸಲ್ಪಡುತ್ತಿರುವುದು ಇದಕ್ಕೆ ಕಾರಣ. ರೋಗಿಗಳ ಹಿತಕ್ಕಾಗಿ ಏನು ಬೇಕಾದರೂ ಮಾಡುವ ಸ್ವಾತಂತ್ರ್ಯ, ಜವಾಬ್ದಾರಿ ಅವರಿಗಿದೆ. ಸದಾಕಾಲ ರೋಗಿಗಳ ಜತೆ ಇರುವವರು ಅವರೇ ಹೊರತು ಡಾಕ್ಟರು ಗಳಲ್ಲ. ಡಾಕ್ಟರರ ಕೆಲಸದ ನಿಜವಾದ ಪರಿಣಾಮ ಕಾಣುವುದು ನರ್ಸುಗಳಿಂದ, ಅವರ ಜಾಗರೂಕತೆಯಿಂದ.

'ಹಾಸ್ಪಿಟಲ್ ಆಫ್ ನರ್ಸಸ್' ಎಂಬ ಸಿದ್ಧಾಂತ ಖಂಡನೀಯವೆಂಬಂತೆ ಕಂಡಬಂದರೂ ಅದು ಇಲ್ಲಿ, ನಮ್ಮ ಆಸ್ಪತ್ರೆಯಲ್ಲಿ ಕಾರ್ಯಗತಗೊಳ್ಳುತ್ತಿರುವ ರೀತಿಯನ್ನು ಅರ್ಥಮಾಡಿಕೊಂಡಾಗ ಅದೊಂದು ಆಸ್ತಿಯೆಂಬಂತೆ ತೋರುತ್ತದೆ. ಅದು ತುಂಬಾ, ತುಂಬಾ ಇತ್ಯಾತ್ಮಕ ವಾದದ್ದು. ಡಾಕ್ಟರುಗಳು, ಸಾಮಾನ್ಯವಾಗಿ ಪುರುಷರು ನರ್ಸುಗಳ ಮೇಲೆ ತಮ್ಮ ಅಧಿಕಾರ ತೋರಿಸುತ್ತಾ ಅವರಿಗೆ ಆಜ್ಞೆಗಳನ್ನು ಕೊಡುವ ಮನೋಭಾವವನ್ನು ಹೊಂದಿರುತ್ತಾರೆ. ಕೆಲದಿನಗಳ ಹಿಂದೆ ಒಬ್ಬ ಡಾಕ್ಟರು ನರ್ಸುಗಳ ವಿರುದ್ಧ ನನಗೆ ದೂರು ಹೇಳಲು ಬಂದರು. ನರ್ಸುಗಳು ತನಗೆ ವಾರ್ಡಿನಲ್ಲಿ ವಿಶೇಷ ಗಮನ ಕೊಡಲಿಲ್ಲ ವೆಂದು ಆತ ಬಹಳ ಸಿಟ್ಟಿಗೆದ್ದಿದ್ದರು (ಹಿಂದೆ ಆತ ಕೆಲಸ ಮಾಡುತ್ತಿದ್ದ ಆಸ್ಪತ್ರೆಯಲ್ಲಿಯಂತೆ). ಆಕೆ ತನ್ನ ಪಾಡಿಗೆ ತನ್ನ ಕೆಲಸ ಮಾಡಿಕೊಂಡಿದ್ದರು. ಡಾಕ್ಟರಾರು ? ತಾನೋ ? ಆಕೆಯೋ ? ರೋಗಿಯ ಜವಾಬ್ದಾರಿ ಇರುವುದುದು ಯಾರಮೇಲೆ ? ತನ್ನ ಮೇಲೆಯೋ ? ಆಕೆಯ ಮೇಲೆಯೋ ? ಹೀಗೆ ಇಂತಹ ವೈದ್ಯ ಸಹಜ ಪ್ರಶ್ನೆಗಳಿಗೆ ಆತನಿಗೆ ಉತ್ತರ ಬೇಕಿತ್ತು. ಕೊನೆಗೆ ನಾನು ಆತನೊಂದಿಗೆ ಹೋಗದ ಹೊರತು ತಾನು ವಾರ್ಡಿಗೆ ಹೋಗುವುದಿಲ್ಲವೆಂದು ಕುಳಿತುಬಿಟ್ಟರು.

ನಾನು ಕೊನೆಗೆ ಆತನಿಗೆ ಹೇಳಲೇಬೇಕಾದ ಮಾತು ಗಳೆಂದರೆ : ನರ್ಸುಗಳಿಗೂ ಮತ್ತು ಡಾಕ್ಟರುಗಳಿಗೂ ಅವರದ್ದೇ ಆದ ಜವಾಬ್ದಾರಿಗಳಿದ್ದು, ಕರ್ತವ್ಯಗಳಿದ್ದು

ಅವೆರಡು ಸಮಾನ ಗೌರವಾರ್ಹವಾದವು ಮತ್ತು ಪರಸ್ಪರ ಸಾಮರಸ್ಯ ಹೊಂದಿರಬೇಕಾದವು ಎಂದು ನಾವು ನಂಬುತ್ತೇವೆ. ಡಾಕ್ಟರರು ಒಬ್ಬ ನರ್ಸು ತನ್ನ ಕೆಲಸಗಳನ್ನೆಲ್ಲಾ ಮಾಡಿಕೊಡಬೇಕೆಂದು ನಿರೀಕ್ಷಿಸುತ್ತಾ ಆಕೆಗೆ ಆಜ್ಞೆಗಳನ್ನು ಮಾಡಲಾಗದು, ಚಾರ್ಟಿನಲ್ಲಿ ಬರೆದಿರುವುದನ್ನು ಮಾಡುವಂತೆ ಆಕೆಯನ್ನು ಕೇಳಿಕೊಳ್ಳಬಹುದಷ್ಟೆ. ಆತ ಅಷ್ಟಕ್ಕೂ ಒಪ್ಪದೆ ಬೇರೆ ಆಸ್ಪತ್ರೆಗಳ ನರ್ಸುಗಳು ತಾನು ಹೇಳಿದಂತೆ ನಡೆದುಕೊಳ್ಳುತ್ತಿದ್ದುದಾಗಿ ತಿಳಿಸಿದರು. ನಾನು ಸ್ವಲ್ಪ ಗಡುಸಾಗಿಯೇ ಆತನಿಗೆ ಹೇಳಿದೆ, "ಇಲ್ಲಿ ಬೇರೆಯಾಗಿದೆ. ಇಲ್ಲಿ ನರ್ಸುಗಳು ರೋಗಿಗಳಿಗಾಗಿ ತಮ್ಮ ಕರ್ತವ್ಯವನ್ನು ಮಾಡುತ್ತಾರೆಯೇ ಹೊರತು ಡಾಕ್ಟರುಗಳಿಗಾಗಿಯಲ್ಲ." ಹೀಗೆ ಡಾಕ್ಟರುಗಳು ಮತ್ತು ನರ್ಸುಗಳ ನಡುವೆ ವಾರ್ಡಿನಲ್ಲಿ ಒಂದು ಬಗೆಯ 'ಅಧಿಕಾರ ಸಂಘರ್ಷ'ವೇ ನಡೆಯುತ್ತದೆ ಇಲ್ಲಿ, ಯಾವಾಗಲೂ. ಇಂತದನ್ನು ನೋಡುವಾಗ 'ಹಾಸ್ಪಿಟಲ್ ಆಫ್ ನರ್ಸಸ್, ಎಂಬ ಪರಿಕಲ್ಪನೆ ಮಹಿಳೆಯರ ಸಶಕ್ತತೆಗೆ ನೀಡುತ್ತಿರುವ ಕಾಣಿಕೆಯನ್ನು ನೀವು ಅಂಗೀಕರಿಸದೆ ಇರುವಿರೇನು ? ವರ್ಷವೆರಡರ ಹಿಂದ ಭಯ-ನಾಚಿಕೆಗಳ ಮುದ್ದೆಯಾಗಿ ದುಗ್ರಮ ಹಳ್ಳಿಯಿಂದ ಬಂದು ನಮ್ಮ ನರ್ಸಿಂಗ್ ಶಾಲೆ ಸೇರಿಕೊಂಡ ಹುಡುಗಿ ಇಂದು ವಾರ್ಡಿನಲ್ಲಿ ಮೇಲೆ ಹೇಳಿದ ಆತ್ಮವಿಶ್ವಾಸ, ದೃಢತೆಗಳಿಂದ ಕಾರ್ಯ ನಿರ್ವಹಿಸುತ್ತಾ ಇಡೀ ಆಸ್ಪತ್ರೆಯಲ್ಲಿ ಲವಲವಿಕೆಯಿಂದ ಓಡಾಡಿಕೊಂಡಿರುವುದನ್ನು ಕಂಡಾಗ ನನಗೆ ಖಂಡಿತವಾಗಿಯೂ ಇದರ ಅನುಭವವಾಗಿದೆ.

**ಪ್ರ. :** ಇದೊಂದು ಹಳೆಯ ಪ್ರಶ್ನೆ. ನರ್ಸಿಂಗ್ ವೃತ್ತಿಯಲ್ಲಿ ಮಹಿಳೆಯರದ್ದೇ ಮೇಲುಗೈ ಇರಲು ಕಾರಣವೇನು ? ಸ್ತ್ರೀವಾದಿ ಟೀಕೆಯೆಂದರೆ ಇದು ಮಹಿಳೆಯರ ತಾಯ್ತನ, ಪಾಲನೆ-ಪೋಷಣೆ ಸಂಬಂಧೀ ಸಾಂಪ್ರದಾಯಕ ಮಾದರಿಗಳ ಮುಂದುವರೆದ ರೀತಿ ಎಂಬುದು. ನಿಮ್ಮ ಅಭಿಪ್ರಾಯ-ಅನುಭವ ಏನು ?

**ಉ.:** ನಾನು ಹಿಂದೆಯೇ ಹೇಳಿದಂತೆ ಮಹಿಳೆಯರಿಗೆ ನಮ್ಮದೇ ಆದ ವ್ಯಕ್ತಿತ್ವವಿದೆ. ನಾವು ಪುರುಷರಂತಾಗಲು ಸಾಧ್ಯವೇ ಇಲ್ಲ. ಒಳ್ಳೆಯ ನರ್ಸಿಂಗ್ ವೃತ್ತಿ ಅವರನ್ನು ಸಮರ್ಥರನ್ನಾಗಿ ಮಾಡುತ್ತದೆ. ಮಹಿಳೆಯರಲ್ಲಿ ಪೋಷಣೆಯ ಗುಣ ಮೈಗೂಡಿಕೊಂಡಿದೆ. ನರ್ಸಿಂಗ್ ವೃತ್ತಿ ಮುಖ್ಯವಾಗಿ ಅದನ್ನೇ ಆಧರಿಸಿದೆ ನಿಜ. ಆದರೆ ಇದರ ನಿರ್ವಹಣೆ ಸಮಾಜಕ್ಕೆ ಒಂದು ದೊಡ್ಡ ಕೊಡುಗೆಯಾಗಿದ್ದು, ಇಲ್ಲಿ ನಾವು ಗಂಡಸರಿಗೆ ಅಡಿಯಾಳಾಗದೆಯೇ ಉಳಿದು ಇದನ್ನು ನಿರ್ವಹಿಸುವುದು ತುಂಬಾ ಮುಖ್ಯವಾಗುತ್ತದೆ.

ನಮ್ಮ ಆಸ್ಪತ್ರೆಯಲ್ಲಿ ನಮ್ಮದೇ ನರ್ಸಿಂಗ್ ಶಾಲೆ ಇದೆ. ಇಲ್ಲಿ ತಮ್ಮ ಶಾಲೆ ಶಿಕ್ಷಣ ಮುಗಿಸಿ ಬರುವ ಸಣ್ಣ ವಯಸ್ಸಿನ ಹುಡುಗಿಯರಿಗೆ ಸಿಕ್ಕುವ ತರಬೇತಿ ಎಂತದೆಂದರೆ, ಅವರು ಘನತೆ, ಪರಿಪೂರ್ಣತೆ ಮತ್ತು ಐಡೆಂಟಿಟಿಗಳನ್ನು ಬೆಳೆಸಿಕೊಳ್ಳಲು ಬೇರೆ ಅಂಶಗಳಿಗಿಂತ ಹೆಚ್ಚು ಒತ್ತು ಕೊಡಲಾಗುತ್ತದೆ. ಏಕೆಂದರೆ ಅವರು ಇಲ್ಲಿ ಡಾಕ್ಟರುಗಳ ಪ್ರಭುತ್ವದಡಿ ಆಜ್ಞಾಪಾಲಕರಾಗಿರುವ ಬದಲು ಅವರೊಟ್ಟಿಗೆ ಸಮಾನತೆಯನ್ನು ಕಂಡುಕೊಳ್ಳುತ್ತಾ, ಜವಾಬ್ದಾರಿಯುತವಾಗಿ ವಾರ್ಡುಗಳನ್ನು ನಡೆಸಿಕೊಂಡು ಹೋಗಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಇದೊಂದು ಘನತೆವೆತ್ತ ವೃತ್ತಿ ಎಂತಲೇ ನನಗನ್ನಿಸುತ್ತದೆ.

**ಪ್ರ :** ಆಧುನಿಕ ವೈದ್ಯಕೀಯ ವ್ಯವಸ್ಥೆ ದೇಶೀಯ ಆರೋಗ್ಯ ವಿಧಾನಗಳ ಮೇಲೆ ಬೀರಿರುವ ಪರಿಣಾಮ ವಿಚ್ಛಿದ್ರಕಾರಕ. ಮಹಿಳೆಯರ ಆರೋಗ್ಯಕ್ಕೆ ಸಂಬಂಧಿಸಿದಂತೆಯಂತೂ ಅದರ ಧೋರಣೆ ತೀರಾ ಅಪಮಾನಕಾರಿ ಯಾದದ್ದು. ಪ್ರತಿಷ್ಠಿತ ಆಸ್ಪತ್ರೆಯ ಮುಖ್ಯಸ್ಥರಾಗಿ ನಿಮ್ಮ ಪ್ರತಿಕ್ರಿಯೆಏನು ?

**ಉ :** ಮೌಲ್ಯಗಳು ಎಲ್ಲೆಡೆ ಕುಸಿಯುತ್ತಿವೆ. ಇದು ವೈದ್ಯಕೀಯಕ್ಕೂ ಅನ್ವಯಿಸುತ್ತದೆ. ಒಂದು ಒಟ್ಟಾರೆಯಲ್ಲಿ ವೈದ್ಯಕೀಯವು ವ್ಯಾಪಾರೀಕರಣಗೊಂಡಿದೆ. ಹಣ ಮಾಡುವ ಮಾರ್ಗ ಇದಾಗಿಬಿಟ್ಟಿದೆ. ಇಂದು ವೈದ್ಯಕೀಯದ ಲಾಭ ಪಡೆಯುತ್ತಿರುವವರು ರೋಗಿಗಳಲ್ಲ. ಬಹುರಾಷ್ಟ್ರೀಯ ಕಂಪನಿಗಳು. ಮಹಿಳೆಯರ ದೇಹಗಳು ಇಲ್ಲಿ ಪ್ರಯೋಗಗಳ ವಸ್ತುಗಳಾಗಿಬಿಟ್ಟಿವೆ. ಬದುಕಿಗೆ ಬೆಲೆಯಿಲ್ಲದೆ, ನೀತಿ ಮೂಲೆಗುಂಪಾಗಿರುವ ಭಯಂಕರ ಸ್ಥಿತಿ ನಮ್ಮ ಮುಂದಿದೆ. ಇದು ನಿಜಕ್ಕೂ ಖಂಡನೀಯ.

ನಮ್ಮ ಆಸ್ಪತ್ರೆಯಲ್ಲಿ, ವೈದ್ಯಕೀಯದಲ್ಲಿ ಒಳಗೊಂಡಿರುವ ಎಲ್ಲರೂ ಬದುಕನ್ನು ಗೌರವಿಸುವುದನ್ನೂ, ಉತ್ತೇಜಿಸುವದನ್ನೂ ಒಂದು ಮೌಲ್ಯವಾಗಿಯೇ ಹೊಂದಿದ್ದೇವೆ. ಇಲ್ಲಿ ಕೃತಕ ಸಂತಾನ ನಿರೋಧಕಗಳನ್ನು, ಗರ್ಭಪಾತಗಳನ್ನು ಮಾಡಲಾಗುವುದಿಲ್ಲ. **ultra sonologist**

ಕೂಡ ಗರ್ಭದಲ್ಲಿರುವ ಮಗುವಿನ ಲಿಂಗವನ್ನು ಬಹಿರಂಗ ಪಡಿಸುವುದಿಲ್ಲ. ಇದು ನಮ್ಮ ಸಣ್ಣ ಪ್ರಯತ್ನ ಮಾತ್ರ. ಅಂದ ಮಾತ್ರಕ್ಕೆ ಜನ ಇದರಿಂದ ದೂರಾಗುತ್ತಾರಂತಲ್ಲ. ಬೇರೆಲ್ಲಾದರೂ ಹೋಗಿ ಅವರು ಭ್ರೂಣದ ಲಿಂಗ ಪರೀಕ್ಷೆ ಮಾಡಿಕೊಂಡು ಗರ್ಭಪಾತ ಇತ್ಯಾದಿಗಳಲ್ಲಿ ತೊಡಗಿಕೊಳ್ಳುತ್ತಾರೆ.

ಮಹಿಳೆಯರ ಪ್ರಶ್ನೆಗೆ ಬದ್ಧರಾಗಿರುವ ನಾವು ಹೆಣ್ಣು ಮಕ್ಕಳ, ಮಹಿಳೆಯರ ಅವಶ್ಯಕತೆಗಳಿಗೆ ಯಾವಾಗಲೂ ಆದ್ಯತೆ ಕೊಡುತ್ತಲೇ ಬಂದಿದ್ದೇವೆ. ನಮ್ಮದು ಜನರಲ್ ಆಸ್ಪತ್ರೆಯಾದ್ದರಿಂದ ಮತ್ತು ವ್ಯವಸ್ಥೆಯೊಳಗೆ ಸಿಕ್ಕಿಹಾಕಿಕೊಂಡಿರುವುದರಿಂದ ನಮ್ಮ ಪ್ರಯತ್ನಗಳು ದೊಡ್ಡ ರೀತಿಯ ಪರಿಣಾಮ ಕಾಣದೇ ಹೋಗುತ್ತವೆ. ಲಿಂಗ ಬೇಧ ಮತ್ತು ಮಹಿಳೆಯರ ಶೋಷಣೆಯ ಸಂಬಂಧದಲ್ಲಿ ನಾವು ಮಾಡಬೇಕಾದ್ದು ತುಂಬಾ ಇದೆ.

**ಪ್ರ :** ನಿಮ್ಮ ನಿರ್ವಹಣೆಯಲ್ಲಿ ನೀವು ಈ ಆಸ್ಪತ್ರೆಯನ್ನು ಹೆಚ್ಚು ದುರ್ಬಲವರ್ಗದೆಡೆಗೆ ಕೊಂಡೊಯ್ದಿರಿ ಎಂಬ ಮಾತಿದೆ. ವ್ಯವಸ್ಥಿತ ರಚಳಯೊಳಗಡೆಗೆ ಇದು ಎಷ್ಟರಮಟ್ಟಿಗೆ ಸಾಧ್ಯವಾಗುತ್ತದೆ. ಬಿಡಿಯಾದ ಪ್ರಯತ್ನಗಳ ದೌರ್ಬಲ್ಯ ಅಥವಾ ಶಕ್ತಿಗಳೇನು ?

**ಉ :** ಆಸ್ಪತ್ರೆಯನ್ನು ದುರ್ಬಲ ವರ್ಗಗಳಿಗೆ ದಕ್ಕುವಂತೆ ಮಾಡಬೇಕೆನ್ನುವ ಪ್ರಯತ್ನ ನಮ್ಮಲ್ಲಿ ಯಾವಾಗಲೂ ಇದೆ. ನಾನು ವಯಕ್ತಿಕವಾಗಿ, ಆಸ್ಪತ್ರೆಗೆ ಎಷ್ಟು ಬಡರೋಗಿಗಳನ್ನು ತಲುಪಲು ಸಾಧ್ಯವೋ ಅಷ್ಟನ್ನೂ ತಲುಪುವಂತೆ ಪ್ರಜ್ಞಾಪೂರ್ವಕವಾಗಿ ಪ್ರಯತ್ನಿಸಿದ್ದೇನೆ. ನಾನು ಹಿಂದೆಯೇ ಹೇಳಿದಂತೆ ವೈದ್ಯಕೀಯ ವ್ಯವಸ್ಥೆಯು ಒಂದು ವ್ಯಾಪಾರದಂತಾಗಿದ್ದು ಔಷಧಿಗಳು ತುಂಬಾ ದುಬಾರಿಯಾಗಿವೆ. ಅನೇಕಸಲ ಈ ದುಬಾರಿ ಔಷಧಿಗಳು, ತಪಾಸಣೆಗಳ ಕಾರಣಕ್ಕೆ ಎಷ್ಟೇ ಪ್ರಯತ್ನ ಪಟ್ಟರೂ ಬಡರೋಗಿಗಳಿಗೆ ಸಂಪೂರ್ಣ ಸಹಾಯ ಮಾಡಲಾಗದೇ ಹೋಗುತ್ತದೆ. ಅನೇಕಸಲ ನಮ್ಮ ಆಸ್ಪತ್ರೆಯಲ್ಲಿ ಕೆಲವು ಸೌಲಭ್ಯಗಳು ಇರುವುದಿಲ್ಲ. ಇಂತಹ ಸಮಯಗಳಲ್ಲಿ, ಒಂದು ದಮನಕಾರಿ ವ್ಯವಸ್ಥೆಯೊಳಗೆ ಹಿಡಿದಿಡಲ್ಪಟ್ಟ ವಯಕ್ತಿಕ ಮಿತಿಗಳ ಜತೆ ಮುಖಾಮುಖಿಯಾಗುತ್ತಾ ಪರಿತಪಿಸಿದ್ದೇನೆ.

---

## ನೀಮ್ ಕ್ಯಾಂಪೈನ್

(15ನೇ ಪುಟದಿಂದ)

ಗೊಳಿಸುವ ಮೂಲಕ ಮೂರನೇ ವಿಶ್ವರಾಷ್ಟ್ರಗಳ ಜೀವವೈವಿಧ್ಯತೆ ಮತ್ತು ಜ್ಞಾನಗಳ ಸಂರಕ್ಷಣೆ ಮಾಡಬೇಕು.

ನೀಮ್ ಕ್ಯಾಂಪೈನ್' ನಿಮ್ಮ ಮತ್ತು ನಿಮ್ಮ ಸಂಸ್ಥೆ-ಗುಂಪುಗಳ ಬೆಂಬಲವನ್ನು ಬಯಸುತ್ತದೆ. ದಯವಿಟ್ಟು ಈ ಕೆಳಗಿನ ವಿಳಾಸಕ್ಕೆ ಬರೆದು ನಿಮ್ಮ ಬೆಂಬಲ ಸೂಚಿಸಿ.

A—60 (Second floor)
Hauz Khas
New Delhi-110 016
India

ಇದರ ನಿರ್ವಾಹಕರು :

— ರಿಸರ್ಚ್ ಫೌಂಡೇಶನ್ ಫಾರ್ ಸೈನ್ಸ್, ಟೆಕ್ನಾಲಜಿ ಅಂಡ್ ನ್ಯಾಚುರಲ್ ರಿಸೋರ್ಸ್ ಪಾಲಿಸಿ.
— ಕರ್ನಾಟಕ ರಾಜ್ಯ ರೈತ ಸಂಘ
— ಅಜಾದಿ ಬಚಾವೋ ಆಂದೋಲನ್,
— ಭಾರತೀಯ ಕಿಸಾನ್ ಯೂನಿಯನ್
— ಆಲ್ ಇಂಡಿಯಾ ಡ್ರಗ್ ಆ್ಯಕ್ಷನ್ ನೆಟ್‌ವರ್ಕ್
— ಪೀಪಲ್ಸ್ ಹೆಲ್ತ್ ನೆಟ್‌ವರ್ಕ್

## ಬಳೆಗಾರ್ತಿ

ಗೋಜಲು ಬಲೆ
ಸಿಕ್ಕಿಕೊಂಡ ನೊಣ
ಅಂಗಳ ರಾವು ಬಡಿದು
ನಿಶ್ಶಬ್ದ !
ಸವೆದ ಕಾಲು
ಎಳೆದೊಯ್ದರೆ
ಎದುರಲಿ ದೊಡ್ಡ ಸಂತೆ
ಕಂತೆ ಕಂತೆ ಸೊಪ್ಪು
ರಾಶಿ ಹೇರಿದ ತರಕಾರಿ
ಕುಯ್ಯಲು, ಕೊಚ್ಚಲು
ಚಾಕು, ಕತ್ತಿ, ಕೊಡಲಿಗಳು
ಹರಿತವಾಗಿ ಝಳಪಿಸಲು ಸಿದ್ದ
ರವಿಕೆ, ಅಂಗಿ, ಚೌಕ
ಇಂತಹದಿಲ್ಲ ಎಂದಿಲ್ಲ
ಹೊತ್ತು ಹೊರಟರೆ ಮನೆಯಾಗುತ್ತವೆ

ಗಿಜಿಗುಟ್ಟುವ ಸಂತೆ
ಅಂಗಳ ನಿಶ್ಶಬ್ದ
ಆ ಮೂಲೆಯಲ್ಲಿಲ್ಲೊ
ಬಳೆಗಾರ್ತಿ !
ಬಿರುಕುಕ್ಕೆಯಲ್ಲಿ
ಬಣ್ಣಗೆಟ್ಟ ಬಳೆತೊಟ್ಟು
ಕೂಗುತ್ತಾಳೆ
ಅಮ್ಮಾರೇ–
ಚಂದದ ಬಳೆ ತೊಟ್ಟರೆ
ಕೈಗೊಂದು ಅಂದ
ಕೈ ನೀಡಿದರೆ
ಚಣದಲ್ಲೇ ತೊಡಿಸುವಳು
ಮಿರಿಮಿರಿ ಮಿರುಗುವ
ಕಪ್ಪು ಬಳೆ
ನಿಗಿನಿಗಿ ಹೊಳೆವ ಕೆಂಪು ಬಳೆ
ಝಣಗುಟ್ಟಿದವು ಬಳೆಗಳು
ನಿಶ್ಶಬ್ದ ಅಂಗಳಕ್ಕೆ
ಸೇರುಗಟ್ಟಲೆ
ರಾಶಿಗಟ್ಟಲೆ
ಶಬ್ದ ತುಂಬಲು

ಸರಸ್ವತಿ ಡು.

## ಓದುಗರ ಗಮನಕ್ಕೆ

- 'ಮಾನಸ' ಸಂಪರ್ಕ ವಿಳಾಸದಲ್ಲಿ ಸಂಪೂರ್ಣ ನೆಲೆಯೂರಲು ಇನ್ನೂ ಸ್ವಲ್ಪ ಸಮಯ ಬೇಕಾಗಿರುವುದರಿಂದ, ಅಂತಿಮವಾಗಿ ತಿಳಿಸುವವರೆಗೂ ದಯವಿಟ್ಟು ಚೆಕ್ಕುಗಳನ್ನು ಮತ್ತು ಡ್ರಾಫ್ಟ್‌ಗಳನ್ನು **ಕಾಡುಗೋಡಿಯ** ವಿಳಾಸಕ್ಕೆ ಕಳಿಸಬೇಕೆಂದು ಕೇಳಿಕೊಳ್ಳುತ್ತೇವೆ.

- 'ಮಾನಸ'ವನ್ನು ಸಂಪರ್ಕಿಸಬಯಸುವವರಿಗಾಗಿ ಇನ್ನು ಮುಂದೆ ತಿಂಗಳ ಪ್ರತಿ ಎರಡನೇ ಶನಿವಾರ ಮತ್ತು ಕೊನೆಯ ದಿನದಂದು 'ಸಂಪರ್ಕ ವಿಳಾಸ'ವೆಂದು ಸೂಚಿಸಿರುವ ಕಛೇರಿಯು ಮಧ್ಯಾಹ್ನ 2 ಗಂಟೆಯಿಂದ ಸಂಜೆ 5 ಗಂಟೆಯವರೆಗೂ ತೆರೆದಿರುತ್ತದೆ. 'ಮಾನಸ' ಬಳಗದ ಯಾರಾದರೂ ಅಲ್ಲಿ ಕಾಣಸಿಗುತ್ತೇವೆ. ಈ ದಿನ-ಸಮಯಗಳಲ್ಲಿ ನಿಮಗೆ ಸ್ವಾಗತವಿದೆ.

**–ಸಂಪಾದಕೀಯ ಮಂಡಳಿ**

REGD NO. KRNA 271

## ಮಾನಸ

ಮಹಿಳೆಯರ ಮೇಲೆ ನಡೆಯುವ ಅಮಾನವೀಯ ದೌರ್ಜನ್ಯ ಹಿಂಸೆಗಳನ್ನು ಬೆಳಕಿಗೆ ತರುವುದಕ್ಕಾಗಿ.

ಶೋಷಿತ ವ್ಯವಸ್ಥೆಯನ್ನು, ಅದರ ವಿವಿಧ ರೂಪಗಳನ್ನು ಗುರುತಿಸುವುದಕ್ಕಾಗಿ

ಮಹಿಳೆಯರೊಂದಿಗೆ ಆತ್ಮೀಯ ಅರ್ಥಪೂರ್ಣ ಸಂವಾದಕ್ಕಾಗಿ

ಮಹಿಳಾ ಆಂದೋಲನದ ಹೊಸ ದಿಕ್ಕುಗಳ ಹುಡುಕಾಟಕ್ಕಾಗಿ

To. praxis
1038. Kachanakanahalli
Thomas Town p.o
Bangalore 560084

ವಿಳಾಸ :
" ಮಾನಸ "
ಪಂಚಾಯಿತಿ ರಸ್ತೆ,
ಕಾಡುಗೋಡಿ
ಬೆಂಗಳೂರು-560 067